ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೫೧ ಮಾರ್ಚ್ ೨೦೧೫ ಸಂಚಿಕೆ : ೦೩



ಶ್ರೀಮಠಕ್ಕೆ ಆಗಮಿಸಿದ್ದ ಸಾಮಾಜಿಕ ಹೋರಾಟಗಾರರಾದ ಶ್ರೀ ಅಣ್ಣಾಹಜಾರೆ ಅವರು ಪರಮಪೂಜ್ಯರ ಪಾದಕ್ಕೆರಗಿ ದರ್ಶನಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉಪಸ್ಥಿತರಿದ್ದರು.




ಶ್ರೀಮಠದಲ್ಲಿ ಜರುಗಿದ ಸಂಯುಕ್ತ ವಿದ್ಯಾರ್ಥಿ ಸಂಘದ ಸಮಾರೋಪ ಸಮಾರಂಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು, ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ರಾಜ್ಯದ ಗೃಹಮಂತ್ರಿ ಶ್ರೀ ಕೆ.ಜೆ. ಜಾರ್ಜ್, ತುಮಕೂರು ಕಾಂಗ್ರೆಸ್ ಜಿಲ್ಲಾಧ್ಯಕ್ಷರಾದ ಶ್ರೀ ಷಫಿ ಅಹಮದ್, ತುಮಕೂರು ಮಹಾನಗರ ಪಾಲಿಕೆ ಮಹಾಪೌರರಾದ ಶ್ರೀಮತಿ ಲಲಿತಾ ರವೀಶ್ ಹಾಗೂ ಮತ್ತಿತರರು ಭಾಗವಹಿಸಿದ್ದರು.



ಶ್ರೀಮಠದ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭದಲ್ಲಿ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು ಆಶೀರ್ವಚನ ನೀಡಿದರು. ಈ ಸಂದರ್ಭದಲ್ಲಿ ಸಮಾಜ ಕಲ್ಯಾಣ ಸಚಿವ ಹೆಚ್. ಆಂಜನೇಯ, ತುಮಕೂರು ಸಂಸದರಾದ ಎಸ್.ಪಿ. ಮುದ್ದಹನುಮೇಗೌಡ, ಮೇಯರ್ ಗೀತಾ ರುದ್ರೇಶ್, ಉಪಮೇಯರ್ ಜಿ.ಆರ್. ಧನಲಕ್ಷ್ಮಿ, ಎ.ಪಿ.ಎಂ.ಸಿ. ಅಧ್ಯಕ್ಷ ಅಶ್ವತ್ಥನಾರಾಯಣ, ಮೈದಾಳ ಗ್ರಾ.ಪ್ರಂ. ಅಧ್ಯಕ್ಷೆ ನೀಲಮ್ಮ ಉಪಸ್ಥಿತರಿದ್ದರು.



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೧ ಮಾರ್ಚ್ ೨೦೧೫ ಸಂಚಿಕೆ : ೩

ಒಳಪುಟಗಳಲ್ಲಿ ..................



ಚಂದಾ ವಿವರ : ವಾರ್ಷಿಕ ಚಂದಾ ರೂ. ೨೦೦/–
ಆಜೀವ ಸದಸ್ಯತ್ವ ರೂ. ೧೫೦೦/– ಬಿಡಿ ಪ್ರತಿ ರೂ. ೧೨.೦೦




ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ

ವಿತರಣೆ :
ಆರ್.ಎಸ್. ಮಲ್ಲೇಶಪ್ಪ
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –೫೭೨ ೧೦೪

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು –೫೭೨ ೧೦೪.

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

## ಆಶಾಜ್ಯೋತಿ

'ಶಿಕ್ಷಣವೆಂದರೆ ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಸರ್ವಾಂಗೀಣ ಕಲಿಕೆಯೇ ನಿಜವಾದ ಶಿಕ್ಷಣ. ಕೆಲವಂ ಬಲ್ಲವರಿಂದ ಕಲಿತು, ಕೆಲವಂ ಶಾಸ್ತ್ರಗಳಿಂದ ಕಲಿತು, ಕೆಲವಂ ಸಜ್ಜನ ಸಹವಾಸದಿಂದ ಕಲಿತು' ಬೆಳೆಯುವುದೇ ಶಿಕ್ಷಣ ಎನ್ನುತ್ತ ತನಗುಪಕರಿಸಿದವರಿಗೆ ಉಪಕರಿಸುವುದೇ ನಿಜವಾದ ವಿದ್ಯೆಯಿಂದ ಬರುವ ಸಂಸ್ಕಾರ'. ಸಚ್ಚಾರಿತ್ರ್ಯ ಸದ್ಭಕ್ತಿ ಮತ್ತು ಸದ್ಗುಣಗಳೇ ಯಾವುದೇ ಶಿಕ್ಷಣದಿಂದ ಬರುವ ಸಂಸ್ಕಾರ'– ಎಂದು ಆಶೀರ್ವಚನ ನೀಡಿದರು ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿ ಗಳವರು ದಿನಾಂಕ ೪-೩-೨೦೧೫ರಂದು ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವದಲ್ಲಿ. ಪೂಜ್ಯ ಶ್ರೀಗಳು ಶ್ರೀಮಠದ 'ಆಶಾಜ್ಯೋತಿ', ಪರಮಪೂಜ್ಯ ತ್ರಿವಿಧ ದಾಸೋಹಮೂರ್ತಿ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಕಣ್ಣನ್ನೆಯರಿತು ಮುನ್ನಡೆಯುತ್ತಿರುವ ಸೇವಾಸಿರಿ. ಪೂಜ್ಯರು ಕ್ಷಣಕ್ಷಣಾರ್ಧವನ್ನು ಶ್ರೀಮಠದ ಕಲ್ಯಾಣಕ್ಕಾಗಿ ವಿನಿಯೋಗಿಸುತ್ತಿರುವ ಪ್ರಾಣಜೀವಾಳ. ಅವರು ಮಾಡದ ಸೇವಾಕಾರ್ಯಗಳಿಲ್ಲ. ದಾಸೋಹ ಮಂದಿರದ ಮೇಲ್ವಿಚಾರಣೆ, ಶಿಕ್ಷಕರಿಗೆ ಮಾರ್ಗದರ್ಶನ, ಮಕ್ಕಳ ಸ್ನಾನ, ಆರೈಕೆ, ಬಂದ ಭಕ್ತಾದಿಗಳೊಡನೆ ಮೃದುಮಧುರ ಮಾತುಕತೆ, ಹಿರಿಯ ಗುರುಗಳ ಸೇವಾಕೈಂಕರ್ಯ, ಆಡಳಿತ ಪತ್ರ ವ್ಯವಹಾರ, ಸಭೆ ಸಮಾರಂಭಗಳಲ್ಲಿ ಭಾಗವಹಿಸುವುದು, ವಿಶೇಷ ಅತಿಥಿಗಳ ಆತಿಥ್ಯದ ಬಗ್ಗೆ ಕಾಳಜಿ. ಶ್ರೀಮಠದ ಹಳೆಯ ವಿದ್ಯಾರ್ಥಿಗಳೊಡನೆ ಆತ್ಮೀಯ ಬಾಂಧವ್ಯ, ಅಧಿಕಾರಿ ವರ್ಗದವರೊಡನೆ ಸಮಾಲೋಚನೆ, ಪ್ರತಿದಿನ ಯೋಗಾಭ್ಯಾಸ, ಲಿಂಗಪೂಜಾನುಷ್ಠಾನ, ಶ್ರೀಮಠದ ಸಾಮೂಹಿಕ ಪ್ರಾರ್ಥನಾ ಸಭೆಯ ಸುವ್ಯವಸ್ಥೆಯಲ್ಲಿ ಭಾಗಿಯಾಗುವಿಕೆ, ಹೊಲ, ತೋಟ, ಗದ್ದೆಗಳ ಕಡೆ ಹೋಗಿ ಬರುವಿಕೆ, ಭಕ್ತಾದಿಗಳಿಗೆ ಪ್ರಸಾದ ವ್ಯವಸ್ಥೆ, ಹಳೇಮಠ ದಲ್ಲಿರುವ ಹರಗುರುಚರಮೂರ್ತಿಗಳೊಂದಿಗೆ ಸ್ನೇಹ ವಿಶ್ವಾಸ, ಅವರಿಗೆ ಸಲಹೆ ಸೂಚನೆಗಳು, ವಿದ್ವಾಂಸರೊಂದಿಗೆ ಸಂದು ಸಂಶಯಗಳ ಚಿಂತನ-ಮಂಥನ, ಶ್ರೀಮಠದ ಜಾನುವಾರುಗಳ ಪೋಷಣೆ, ಸಿದ್ಧಗಂಗಾ ಮಾಸಪತ್ರಿಕೆಯ ಪ್ರಕಟನೆಗೆ ನಿರ್ದೇಶನ, ಮುದ್ರಣಾಲಯದ ವಿಚಾರಣೆ, ಹಣಕಾಸಿನ ವಿಚಾರದಲ್ಲಿ ಎಚ್ಚರ, ಹಿರಿಯ ಗುರುಗಳ ಆದರ್ಶಪಥಗಾಮಿಯಾಗಿ ಮುನ್ನಡೆದಿದ್ದಾರೆ ಪರಮಪೂಜ್ಯ ಶ್ರೀ ಸಿದ್ಧಲಿಂಗಮಹಾಸ್ವಾಮಿ ಗಳು ಶ್ರೀಮಠದ ಆಶಾಜ್ಯೋತಿಯಾಗಿರುತ್ತಾರೆ.

ದಿನಾಂಕ ೧೧-೦೨-೨೦೧೫ರಿಂದ ೨೦-೦೨-೨೦೧೫ ರವರೆಗೆ ಶ್ರೀ ಸಿದ್ಧಲಿಂಗೇಶ್ವರ ಜಾತ್ರಾ ಮಹೋತ್ಸವದ ಎಲ್ಲ ಕಾರ್ಯಕ್ರಮಗಳೂ ಸಾಂಗವಾಗಿ ಜರುಗಿದವು. ೧೦೭ ವರ್ಷದ ಪರಮಪೂಜ್ಯ ಶ್ರೀಶ್ರೀಗಳವರ ದಿವ್ಯನೇತೃತ್ವದಲ್ಲಿ, ವಸ್ತುಪ್ರದರ್ಶನ ೦೬-೦೨-೨೦೧೫ರಿಂದ ೨೦-೦೨-೨೦೧೫ರವರೆಗೆ ನಡೆಯಿತು. ಧಾರ್ಮಿಕೋಪನ್ಯಾಸಮಾಲೆ ೧೧-೦೨-೨೦೧೫ರಿಂದ ೨೦-೦೨-೨೦೧೫ರವರೆಗೆ ಜರುಗಿತು. ಉತ್ಸವಗಳು, ದನಗಳ ಪ್ರದರ್ಶನ, ಬಹುಮಾನ ಕಾರ್ಯಗಳು ಜರುಗಿದವು. ಅನೌಪಚಾರಿಕ ವಿಶ್ವವಿದ್ಯಾಲಯದಂತೆ, ಭಾವೈಕ್ಯ ಸಮ್ಮೇಳನದಂತೆ ಜಾತ್ರೆ ನಡೆಯಿತು.

– ಸಂಪಾದಕ





## ನನಗೆ ಗೊತ್ತಿಲ್ಲ



ಈ ಮಠಕ್ಕೆ ಭಕ್ತರೇ ಆಸ್ತಿ. ಈಶ್ವರ ಕೃಪೆಯೇ ಅಕ್ಷಯ ಪಾತ್ರೆ. ನಾನು ನಿಮಿತ್ತ ಮಾತ್ರ. ಅವನೊಲಿದರೆ ಕೊರಡೂ ಕೊನರುತ್ತದೆ. ಬಂಜರು ನೆಲ ಫಲವತ್ತಾಗುತ್ತದೆ. ತಪೋನಿಷ್ಠೆಯಿಂದ ಕಾಯಕ ಮಾರ್ಗದಿಂದ ದುಡಿದರೆ ಈಶ್ವರ ತಾನಾಗಿಯೇ ಒಲಿಯುತ್ತಾನೆ. 'ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ, ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ, ಸದ್‌ಭಕ್ತರಿಗೆ ಎತ್ತ ನೋಡಿದಡತ್ತ ಲಕ್ಷ್ಮಿತಾನಾಗಿಪ್ಪಳು', 'ಎನ್ನಿಂದಲೇ ಆಯಿತ್ತು, ಎನ್ನಿಂದಲೇ ಹೋಯಿತ್ತು, ಎಂಬುವನ ಬಾಯಲ್ಲಿ ಮೆಟ್ಟ ಹುಡಿ ಹೊಯ್ಯದೆ ಮಾಣ್ಬನೆ ಕೂಡಲಸಂಗಮ ದೇವ?' 'ಒಡೆಯರಿಗೊಡವೆಯನೊಪ್ಪಿಸುವುದೇ ನೇಮ'. ಒಡೆಯರು ಯಾರು? ಶರಣರು. ದೀನ, ದರಿದ್ರರು.

**ಮಾಡಿದೆನೆಂಬುದು ಮನದಲ್ಲಿ ಹೊಳೆದಡೆ**
**ಏಡಿಸಿ ಕಾಡಿತ್ತು ಶಿವನ ಡಂಗುರ**
**ಮಾಡಿದೆನೆನ್ನದಿರಾ ಲಿಂಗಕ್ಕೆ**
**ಮಾಡಿದೆನೆನ್ನದಿರಾ ಜಂಗಮಕ್ಕೆ**
**ಮಾಡಿದೆನೆಂಬುದು ಮನದಲ್ಲಿಲ್ಲದಿದ್ದಡೆ**
**ಬೇಡಿತ್ತನೀವ ಕೂಡಲಸಂಗಮದೇವಾ**

ಯುಗಪುರುಷ ಬಸವೇಶ್ವರರೇ ಹೀಗೆ ಹೇಳಿಕೊಳ್ಳುವಾಗ ನನ್ನ ಅಗ್ಗಳಿಕೆ ಏನಿದೆ? ಇಷ್ಟೆಲ್ಲ ಅಭಿವೃದ್ಧಿ ಹೇಗೆ ಆಯಿತೆಂಬುದೇ ನನಗೆ ಗೊತ್ತಿಲ್ಲ.

**(ಕೃಪೆ : ಸಿದ್ಧಗಂಗೆಯ ಶಿವನಿಧಿ – ಡಾ.ದೇಜಗೌ – ಪ್ರಕಾಶನ – ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು(ರಿ)-೧೫೬೮ – ಅನಿಕೇತನ ರಸ್ತೆ- ಕುವೆಂಪುನಗರ-ಮೈಸೂರು)**

❖

## ಶ್ರೀ ಸಿದ್ಧಲಿಂಗೇಶ್ವರ ವಚನ



*ಮಿಂಚಿನ ಪ್ರಭೆಯಲ್ಲಿ ಪಂಚವದನನ ಕಂಡೆನಯ್ಯಾ*
*ಸಂಚಲವಿಲ್ಲದೆ ನಿರೀಕ್ಷಿಸಲು,*
*ಪಂಚ ಪಂಚೀಕೃತ ಪ್ರಪಂಚು ಪರಿಹಾರವಾಗಿ,*
*ನಿಃಪ್ರಪಂಚ ನಿರ್ಲೇಪಕನಾದೆನು ನೋಡಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಚಿತ್ಪ್ರಕಾಶಜ್ಞಾನದಲ್ಲಿ ಐದು ಮುಖವನುಳ್ಳ ಸದಾಶಿವ ಮೂರ್ತಿ ಇರುವಂಥಾದನು, ನೋಡಿದೆನಯ್ಯಾ ದೇಹಕರಣ ಇಂದ್ರಿಯ ವಿಷಯಂಗಳ ಚಪಲತ್ವವಿಲ್ಲದೆ ಮಹಾಜ್ಞಾನ ಚಕ್ಷುವಿನಿಂದ ನಿರೀಕ್ಷಣೆಯ ಮಾಡಲು ಒಂದೊಂದಕ್ಕೆ ಐದೈದು ಕೃತಿಗಳನು ತಳೆದಿರುವ ಪ್ರಕೃತಿಯು ನಷ್ಟವಾಗಿ ಪ್ರಪಂಚವಿಲ್ಲದ ಪುಣ್ಯಪಾಪಗಳ ಪೊರ್ದಿಗೆ ಇಲ್ಲದಾತ ನಾದೆನು ಕಂಡಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ : ತೋಂಟದಾರ್ಯ ವಚನ ವ್ಯಾಖ್ಯೆ-
ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ ಪ್ರಕಾಶಕರು,
ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ)
ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

### ಶ್ರೀವಾಣಿ

ಮಾನವ ಜನ್ಮವನ್ನು ಸಾರ್ಥಕಗೊಳಿಸಲು ಸಾಧಕ ವಾದದು ಧರ್ಮ. ಈ ಬಗೆಯ ಧರ್ಮದ ಆಚರಣೆ ದಿನ ನಿತ್ಯದ ಜೀವನ ಕ್ರಮವಾಗಬೇಕು. ಧರ್ಮದಿಂದ ಹಣವನ್ನು ಗಳಿಸಬೇಕು. ಧರ್ಮಕ್ಕೆ ವಿರುದ್ಧವಾದ ಗಳಿಕೆ ಅನರ್ಥವಾಗುತ್ತದೆ. ಧರ್ಮ, ಅರ್ಥ ಕಾಮಗಳು ನಮಗೆ ಮುಂದೆ ಸಿಗಬಹುದಾದ ಮೋಕ್ಷಕ್ಕೆ ಸಹಾಯ ವಾಗಬೇಕು.

## ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ಅಶನಕ್ಕೆ ಬರಲಿಲ್ಲ ವ್ಯಸನಕ್ಕೆ ಬರಲಿಲ್ಲ
ಯಶದಕಾಮಿಯಾಗಿ ನೀ ಬರಲಿಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಪ್ರತಿರೂಪವೆ ಬಸವಪ್ರತಿಧ್ವನಿಯೆ
ಬಸವಪ್ರತಿಯಾತ್ಮವೆ ಜಯನಿಜವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಸಂಪನ್ನಸಿರಿಯೆ ಸೇವಾಸಂಪನ್ನಗಿರಿಯೆ
ಕಾರುಣ್ಯಕಮನೀಯ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾನೆತ್ತಬಲ್ಲೆನು ನಿಮ್ಮಸಿರಿ ಶಿವಘನವ
ನಾ ಬಲ್ಲೆನೊಂದೇ ತವಚರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನುವೆ ಚಮ್ಮಾವುಗೆ ಮನವೆ ನಡೆಮುಡಿ
ಘನಗುರುವೆ ದಯಮಾಡಿ ಬೇಡುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಯೋತಿಯ ಕೂಡಾಡಿ ಕತ್ತಲೆಕೆಡುವಂತೆ
ತವಪಾದದೊಳಾಡಿ ಭವಗೆಟ್ಟೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿದಂತೆ ನಡೆಯದವರ ಕಂಡು ಮರುಗುವ
ನುಡಿನಡೆಗೆ ಸೇತುವೆ ಕಟ್ಟಿನುವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುಣರತ್ನ ಮೌನೀಶ ಶರಣ ಮಂಗಳ ಕಳಸ
ಶರಣಲೋಕದ ಶಿವಕಳಸ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಶೆನಿರಾಶೆಗಳ ಹತ್ತಿರ ಸುಳಿಸದ
ಚಿಂತೆ ನಿಶ್ಚಿಂತೆಗಳ ಗೆಲಿದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೇವಾಕಾಮಿಸಿರಿಯೆ ಲಿಂಗಾಕಾಮಿಶಿವವೆ
ದಾಸೋಹ ಶಿವಕಾಮಿ ಸಿರಿಗಂಧ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು

– ಹೆಚ್.ವಿ. ವೀರಭದ್ರಯ್ಯ







## ವಿಮಲ ಜೀವನ

– ಶ್ರೀಸಿದ್ಧೇಶ್ವರ ಸ್ವಾಮಿಗಳು *

ಇದು ಚಿಂತನೆಯ ಸಮಾರೋಪ. ಇದು ವೈಯಕ್ತಿಕ ಚಿಂತನೆಯ ಸಮಾರೋಪ ಅಲ್ಲ. ಸಾಮೂಹಿಕ ಚಿಂತನೆಯ ಸಮಾರೋಪ! ಚಿಂತನೆ ಜೀವನಾದ್ಯಂತ ಸಾಗಬೇಕಾದ ಸಂಗತಿ! ಹೇಗೆ ಉಸಿರು ಹಾಗೆ ಚಿಂತನ! ಉಸಿರು ಎಷ್ಟು ಬದುಕಿಗೆ ಅವಶ್ಯ, ಅಷ್ಟೇ ದೈವೀ ಬದುಕಿಗೆ ಚಿಂತನೆಯು ಅವಶ್ಯ! ಉಸಿರು ದೈಹಿಕ ಆರೋಗ್ಯವನ್ನು ಕೊಟ್ಟರೆ, ಚಿಂತನೆ ಆತ್ಮಿಕ ಸಂತಸವನ್ನು ನೀಡುತ್ತದೆ. ಆ ಸಂತೋಷದ ಹಿನ್ನಲೆ ಯಲ್ಲಿ ಭೌತಿಕ ವಿಷಯಗಳನ್ನು ಸಹಜ ಅನುಭವಿಸಿದರೆ ಆ ವಿಷಯಾನುಭವ ನಮ್ಮನ್ನು ಬಂಧಿಸುವುದಿಲ್ಲ.

ಶಬ್ದಾದಿ ವಿಷಯಗಳು, ಅವುಗಳನ್ನು ಇಂದ್ರಿಯಗಳಿಂದ ಅನುಭವಿಸುವುದು 'ಜೀವನ'. ಈ ಅನುಭವ ನಮ್ಮನ್ನು ಬಂಧಿಸುವ ಸಾಧ್ಯತೆ ಬಹಳ. ಹಾಗಾಗಬಾರದಲ್ಲವೆ? ಅದಕ್ಕಾಗಿ ಭಗವಚ್ಚಿಂತನ. ಯಾವ ವಸ್ತು ಸತ್ಯವಾಗಿದೆಯೋ ಅದನ್ನು ಅನುಭವಿಸುವುದು 'ಭಗವಚ್ಚಿಂತನ'.

ಒಬ್ಬ ಸಂತನು ಸುಂದರ ಮನೆ ಕಂಡ. ಸಂತೋಷ ಪಟ್ಟ. ಮುಂದೆ ಸಾಗಿದ. ಇನ್ನೊಬ್ಬ ಬಂದ. ಮನೆ ಕಂಡ. ಅಂಥ ಮನೆ ತನ್ನದಾಗಬೇಕೆಂಬ 'ಕನಸ' ಕಟ್ಟಿದ. ಅದಕ್ಕಾಗಿ ಬದುಕನ್ನೆಲ್ಲಾ ಹವಿಸಿದ! ತನ್ನ ಆಶಾಕನಸಿನಲ್ಲಿಯೇ ಬಂಧಿತ ನಾದ. ಸಂತ ಮುಕ್ತ. ಆಶಾಜೀವಿ ಬಂಧಿತ! ಏಕೆ? ಸಂತ ಭಗವಚ್ಚಿಂತಕ, ಸಂಸಾರಿಯೂ ವಿಷಯ ಚಿಂತಕ.

*ನಿಮ್ಮಲ್ಲಿ ನೀವು ತಿಳಿದು ನೋಡಿರೇ, ಅನ್ಯವಿಲ್ಲ ಕಾಣಿರಣ್ಣಾ*
*ಅರಿವು ನಿಮ್ಮಲ್ಲಿ ತದ್ಗತವಾಗಿ ಇದೆ*
*ಅನ್ಯಭಾವವ ನೆನೆಯದೆ ತನ್ನೊಳಗೆ ತಾನೇ*
*ಎಚ್ಚತ್ತರಿಯಲು ಬಲ್ಲರೆ ತನ್ನಲ್ಲಿ ತನ್ಮಯ*
*ಗುಹೇಶ್ವರ ಲಿಂಗವು.*

ಭಗವಂತನನ್ನರಿಯಲು ಎಲ್ಲಿಗೂ ಹೋಗಬೇಕಿಲ್ಲ. ಅತಿ ಶಾಸ್ತ್ರದ ಅವಶ್ಯಕತೆಯಿಲ್ಲ. ದೇಹವಿನಾಶಕ. ಮನಸ್ವಾಸ್ಥ್ಯ ಹಾರಕ ತಪಸ್ಸಿನ ಗೊಡವೆಯಿಲ್ಲ. ನಮ್ಮಲ್ಲಿಯೇ ಆ ಸತ್ಯವಡಗಿದೆ. ದೇಹ ಮನಸ್ಸುಗಳಲ್ಲಿಯೇ ಅವುಗಳಿಗೆ ವಿಲಕ್ಷಣವಾದ ದೇವ ಅಡಗಿದ್ದಾನೆ. ಅವನನ್ನು ನಮ್ಮಲ್ಲಿಯೇ ಮುಳುಗಿ ನೋಡಬೇಕು. ಭಾವ ತೆರೆಯಡಗಿಸಿ ಆ ದೇವನನ್ನು ಅನುಭವಿಸಬೇಕು. ಅಲ್ಲಿ ಭೇದವಿಲ್ಲ. ಗುರು ಶಿಷ್ಯ ಕಲ್ಪನೆಯಿಲ್ಲ. ದೃಶ್ಯ-ದ್ರಷ್ಟಾಭಾವವಿಲ್ಲ! ಅದನ್ನು ಅನುಭವಿಸುವುದೆಂದರೆಯೇ ಮಹಾಪವಾಡ! ಅಸಾಧ್ಯ ಸಾಧನೆ! ಭೇದ ವಿಶ್ವದ ಪ್ರಭಾವಕ್ಕೊಳಗಾಗದ ಸ್ಥಿತಿ!

ಜಪಾನ್ ದೇಶ. ಅಲ್ಲಿ ಒಬ್ಬ ಸಂತ. ಆ ಸಂತ ಕುಳಿತುಕೊಂಡು ಉಪದೇಶ ಮಾಡುತ್ತಿದ್ದ. ಉಪದೇಶ ದೊಳಗೆ ಆ ಜನ ಮಗ್ನರಾಗಿದ್ದರು. ಮಧುರವಾದ ಮಾತು ಗಳನ್ನು ಕೇಳುವಲ್ಲಿ ಮೈಮರೆತಿದ್ದರು. ಅಲ್ಲಿಗೆ ಒಬ್ಬ ಸಿದ್ಧ ಸಾಧಕ ಬಂದ. ಆತ ನೋಡಿದ. ಬಹಳಷ್ಟು ಜನ ಮಂತ್ರ ಮುಗ್ಧರಾಗಿ ಕೇಳುತ್ತಿದ್ದಾರೆ. ಅವನಿಗೆ ಮತ್ಸರವೆನಿಸಿತು. ಉರಿದೆದ್ದ. 'ನಿನಗೇನು ತಿಳಿದಿದೆ ಎಂದು ಹೇಳುವಿ! ನೀನೊಬ್ಬ ಶತಮೂರ್ಖ. ನಿನ್ನಲ್ಲಿ ಅಂಥ ದೈವೀ ಶಕ್ತಿಯಿದ್ದರೆ ಒಂದು ಚಮತ್ಕಾರ ಮಾಡಿ ತೋರಿಸು' ಎಂದ. ಆಗ ಸಂತ ಹೇಳಿದ; 'ನನಗೆ ಏನೂ ಗೊತ್ತಿಲ್ಲ, ಚಮತ್ಕಾರ ಅರಿಯೆ. ಬೇಕಾದರೆ ತಾವು ಮಾಡಿ. 'ಸಿದ್ಧಿ ಸಾಧಕ ಈ ಕಡೆ ನಿಂತ. ಮಧ್ಯದಲ್ಲಿ ಹೊಳೆ. ಆ ಕಡೆ ತನ್ನ ಶಿಷ್ಯನನ್ನು ನಿಲ್ಲಿಸಿದ. ಶಿಷ್ಯನ ಕೈಯಲ್ಲೊಂದು ಹಾಳೆ. ಆ ಕಡೆ ಗುರು. ಇಲ್ಲಿ ನಿಂತು ಬರೆದ. ಆ ದಡದ ಶಿಷ್ಯನ ಹಾಳೆಯೊಳಗೆ ಅದು ಮೂಡಿತು. ಸಾವಿರಾರು ಜನ ಆಶ್ಚರ್ಯಪಟ್ಟರು! ಕೇಕೆ ಹಾಕಿದರು! ನಿಜವಾದ ಗುರು ಇಲ್ಲಿ ಇದ್ದಾನೆ ಎಂದು ಭಾವಿಸಿದರು. ಆ ಸಿದ್ಧನಿಗೆ ಆನಂದವೋ ಆನಂದ. ಆತ ಸಂತನಿಗೆ ಹೇಳಿದ ಆಢ್ಯತೆಯಿಂದ 'ಈವಾಗ ನಿನ್ನ ಸರದಿ; ಮಾಡಿ ತೋರಿಸು! ಇಲ್ಲವಾದರೆ ಈ ಉಪದೇಶ ಉದ್ಯೋಗ ಬಿಟ್ಟುಬಿಡು' ಎಂದ. ಆಗ ಸಂತ ಹೇಳಿದ 'ನಾನೂ ಸಣ್ಣ ಪುಟ್ಟ ಪವಾಡಗಳ ಮಾಡಬಲ್ಲೆ. ಉದಾಹರಣೆಗಾಗಿ ಹಸಿದಾಗ ಉಣ್ಣುತ್ತೇನೆ. ನೀರಡಿಸಿದಾಗ ಕುಡಿಯುತ್ತೇನೆ. ನೀನು ಜರೆದಂತೆ ನನ್ನನ್ನು ಜನ ನಿಂದಿಸಿದಾಗ ಅದನ್ನು ತತ್‌ಕ್ಷಣ ಕ್ಷಮಿಸುವೆ. ಮರೆತೂ ಬಿಡುವೆ! ಆದರೆ ನೀರು ಅನ್ನ ನನ್ನ ದೃಷ್ಟಿಯಲ್ಲಿ ದೇವಪ್ರಸಾದ. ನಿಂದೆ ಸಹಜ ಸಾಮಾನ್ಯ ಸಂಗತಿ. ಅದು ಭವಗದಿಷ್ಟ! ಆ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ನಿಂದೆ ಅಪಮಾನಗಳ ಮರುಕ್ಷಣ ಮರೆತುಬಿಡುವೆ! ಆ ಘಟನೆಗಳು ನಡೆದಿಲ್ಲವೆಂಬಂತೆ!'

ಇದು ದಿವ್ಯ ಜೀವನ. ಸಹಜ ಸಾಮಾನ್ಯ ಬಾಳು. ಹೀಗಿರುವುದೇ ಮಹಾಪವಾಡ! ನಾನು ಮಾತನಾಡುತ್ತಿದ್ದೇನೆ ನೀವು ಕೇಳುತ್ತಿದ್ದೀರಿ. ಈ ಎರಡೂ ಕ್ರಿಯೆಗಳಲ್ಲಿ 'ನಾನು' ಭಾವ ಸ್ಪಂದಿಸದಷ್ಟು ಸಹಜ ಮಗ್ನತೆ ಉಂಟಾದರೆ ಅದು ಪವಾಡ! ಪ್ರವಚನ ಮುಗಿದಾಗ ಹೇಳಿದ ಕೇಳಿದ ಭಾವವಿಲ್ಲದೆ ಎಲ್ಲ ಇಲ್ಲಿಯೇ ಮರೆತು ಹೊರ ನಡೆದುಹೋದರೆ ಅದು ಪವಾಡ!! ತಾವು ೩೦ ದಿನ ಕೇಳಿದಿರಲ್ಲ, ಇದನ್ನು ಹಾಗೂ ನನ್ನನ್ನು ಸಂಪೂರ್ಣವಾಗಿ ಮರೆತುಬಿಡುವುದೇ ಪವಾಡ! ಯಾರು ಯಾರು ಕೇಳಿದ್ದಾರೆ? ಏನು ಏನು ಹೇಳಿದ್ದೇನೆ? ಎನ್ನುವುದನ್ನೆಲ್ಲಾ ನೆನೆಸಿಕೊಳ್ಳದೆ ಹೋದೆ ನಾದರೆ ಅದು ನಿಜವಾದ ಪ್ರವಚನ. ಪವಾಡ!

ಬದುಕಿನಲ್ಲಿ ಕೊಡುವುದು ತೆಗೆದುಕೊಳ್ಳುವುದು, ಗಳಿಸುವುದು ಬಳಸುವುದು, ಅನಿವಾರ್ಯ! ಆದರೆ ಅದೆಲ್ಲ ಅಷ್ಟಕ್ಕಷ್ಟೇ ಇರಬೇಕು. ಅದು ನಮ್ಮಂತರಂಗವನ್ನೇ ವ್ಯಾಪಿಸುವಂತಿರಬಾರದು. ಜೀವನದ ಕೊನೆಯ ಕ್ಷಣದವರೆಗೂ ಅದು ಉಳಿಯಬಾರದು ಅಲ್ಲವೇ? ಇದು ನಿರಾಭಾರ ಜೀವನ. ನಿಶ್ಚಿಂತ ನಿರಾಮಯ ಬದುಕು. ಇದು ಭಗವ ಚ್ಚಿಂತನದ ಪ್ರತಿಫಲ! ಪರಿಣಾಮ ಫಲ!

ತಾವು ಸುಶಿಕ್ಷಿತರು. ಸುಸಂಸ್ಕೃತರು. ಅರಿತ ವಿದ್ವಾಂಸರು. ನಾನೇನೋ ತಮಗೆ ಹೇಳಿದೆನೆಂದಲ್ಲ. ತಮ್ಮ ಮನೋಗತ, ತಮ್ಮ ಮನೀಷೆ ನನ್ನ ಮೂಲಕ ಅಭಿವ್ಯಕ್ತ ವಾಗಿರಬೇಕು, ಅಷ್ಟೇ. ನಮ್ಮ ಮಧ್ಯದ ಸದ್ಭಾವ ಸಚ್ಚಿಂತನೆಗೆ ಕಾರಣ!

ಹಿಂದಿನ ಅನುಭಾವಿಗಳು ಚಿಂತನೆಗೆ ಅತ್ಯಂತ ಮಹತ್ವ ಕೊಟ್ಟರು. ತೈತ್ತಿರೀಯ ಋಷಿ ಹೇಳುತ್ತಾನೆ. 'ದಮ ಶಮಗಳನ್ನು ಸಾಧಿಸು; ಸತ್ಯ ಕಾರುಣ್ಯಗಳ ರೂಢಿಸು; ಯಾಗ ಆರಾಧನೆ ಗೈ. ಸ್ಥೂಲ ಸೂಕ್ಷ್ಮ – ಯಾವ ಸಾಧನೆಯನ್ನೇ ಮಾಡು. ಗೃಹಸ್ಥ ಅಥವಾ ಸನ್ಯಾಸ ಬಾಳ ಸಾಗಿಸು. ಆದರೆ ಒಂದು ಮರೆಯಬೇಡ. ಅದು ಸ್ವಾಧ್ಯಾಯ-ಪ್ರವಚನ!' ದಿನದಿನವೂ ಆಯುಷ್ಯವಿಡಿ ನಡೆಯಬೇಕು. ತಾನೊಬ್ಬನೇ ಇದ್ದರೆ ಸ್ವಾಧ್ಯಾಯ, ನಾಲ್ಕು ಜನ ಸಹೃದಯರಿದ್ದರೆ ಪ್ರವಚನ! ದಿನಕ್ಕೊಮ್ಮೆಯಾದರೂ! ಶರಣರೂ ಹಾಗೆಯೇ, ಅನುಭಾವ ನಡೆಸಿದರು ನಿತ್ಯ ನಿತ್ಯ! ಕಾಯಕ, ಕಾಯಕದ ನಂತರ ಅನುಭಾವ! ಅರ್ಚನ, ಅರ್ಚನೆಯೊಂದಿಗೆ ಅನುಭಾವ ಚಿಂತನ! ಆದ್ದರಿಂದಲೇ ಅವರ ಬದುಕು ದೇವಪ್ರಸಾದ! ಪ್ರಪಂಚ ಪಾರಮಾರ್ಥ ಎರಡಲ್ಲ ಒಂದು. ಸ್ವಾಧ್ಯಾಯ-ಪ್ರವಚನದೊಂದಿಗಿನ ಕ್ರಿಯಾಶೀಲ ಸತ್ಯಶೀಲ ಬದುಕು!

ಸತ್ಯ ಸ್ವೀಕರಿಸಿದ ಬಳಿಕ ಅದು ದಿನದ ಯಾವುದೋ ಒಂದು ಗಳಿಗೆಗೆ ಸೀಮಿತವಾದರೆ ಹೇಗೆ? ಮುಂಜಾನೆ ಒಂದು ತಾಸು ಸತ್ಯ ನುಡಿವುದು; ನಂತರ ವ್ಯವಹಾರ? ಅದು ಸತ್ಯದ ಸಾಧನೆ ಎನಿಸದು. ಹಾಗೆ ಪಾರಮಾರ್ಥ ಚಿಂತನೆ ಕಾಲಮಿತವಾದರಾಗದು. ವ್ಯಾವಹಾರಿಕ ಬದುಕಿನಲ್ಲೆಲ್ಲಾ ಅದು ವ್ಯಾಪಿಸಬೇಕು. ಶಾಂತಿಸಮಾಧಾನದಿಂದಿರುವುದೇ ಪರಮಾರ್ಥವೆಂದಿಟ್ಟುಕೊಂಡರೆ ನಾವೇನೇ ಕಾರ್ಯ ಮಾಡಿದರೂ ಆ ಸಮಾಧಾನ ಸಂಪೂರ್ಣ ಕೆಟ್ಟು ಹೋಗಬಾರದಲ್ಲ! ಈ ಚಿಂತನೆಯ ಉದ್ದೇಶವೂ ಅಷ್ಟೇ. ಸತ್ಯದ ಪರಿಭಾವನೆ ನನ್ನ ನಿಮ್ಮ ಬಾಳನ್ನು ವ್ಯಾಪಿಸಬೇಕು ಎಂದು.

ಸತ್ಯದ ಚಿಂತನವೇ ಆಧ್ಯಾತ್ಮ. ಇಂತಹ ಆಧ್ಯಾತ್ಮವನ್ನು ತಾವು ಮುಕ್ತಾಯ ಮಾಡುವುದಲ್ಲ, ವೈಯಕ್ತಿಕ ಜೀವನದೊಳಗೆ ಹರವಿಕೊಳ್ಳುವುದು. ಅದೇ ಚಿಂತನದ ಸಮಾರೋಪ ಸಮಾರಂಭ. ಈ ಸಮೂಹ ಚಿಂತನ ಇಂದು ಕೊನೆಯಾದರೂ ವೈಯಕ್ತಿಕ ಚಿಂತನ ಅವ್ಯಾಹತವಾಗಿ ಸಾಗಲಿದೆ. ಅದು ಮುಗಿಯದು; ಮುಗಿಯಬಾರದು ಕೂಡ.

ಇಲ್ಲಿಗೆ ತಪ್ಪದೆ ಆಗಮಿಸಿ ಕೇಳಿ ಸಂತೋಷಿಸಿದ ತಮ್ಮ ಕುರಿತು ಒಂದು ಮಾತು. ಬಹುಶ್ರುತರು. ತಿಳುವಳಿಕೆ ಯಲ್ಲಿ ಅನುಭವದಲ್ಲಿ ಅಭಿವ್ಯಕ್ತಿಯಲ್ಲಿ ಹಿರಿಯರು. ಆಗಲೇ ತಮ್ಮ ಮೂವರು ವಿದ್ವಾಂಸರ ಮಾತ ಕೇಳಿದೆ. ಎಂಥ ಮಾತು! ಸಾರಸಾರವಾಗಿ ನಿರೂಪಿಸುವ ಅದ್ಭುತ ಕಲೆ. ನಯ ವಿನಯದ ಭಾಷೆ. ಆಧ್ಯಾತ್ಮಿಕ ಎತ್ತರವರಿತು ಹರ್ಷಿಸುವ ಸಾಧನೆ. ತಮ್ಮೊಡನೆ ತಿಂಗಳು ಕಳೆವ ಸದವಕಾಶ ನನಗೆ ತುಂಬ ಸಂತಸವಿತ್ತಿದೆ. ತಮ್ಮನ್ನು ಕಂಡು, ತಮ್ಮ ಮಾತ ಕೇಳಿ ಸಾಕಷ್ಟು ಕಲಿತೂ ಇದ್ದೇನೆ.

ಆ ಬಳಿಕ ಹಲವಾರು ಗುರುಗಳು ದಿನವೂ ಬಂದು ಆಲಿಸಿದ್ದಾರೆ ಸಂತೋಷದಿಂದ. ಮೈಸೂರಿನಲ್ಲಿ ಅಗಾಧ ಜ್ಞಾನಸಾಧಕರಿದ್ದಾರೆ. ಗಾಢ ಅಧ್ಯಯನ, ಆಳವಾದ ಚಿಂತನ, ಶೋಧನೆ, ಅವರೆಲ್ಲ ತುಂಬಿದ ಕೊಡ. ಜ್ಞಾನಪೂರ್ಣರು.

ತಮ್ಮನ್ನೆಲ್ಲಾ ಕಂಡಾಗ ಭಾರತದೇಶದ ಅಪ್ರತಿಮ ವಿದ್ಯೆಯ ದರ್ಶನ, ಮೇಧಾದರ್ಶನ, ಅನುಭಾವದರ್ಶನ ಉಂಟಾಗುತ್ತದೆ. ಪರಮಪವಿತ್ರವಾದ ಎಲ್ಲ ಗುರುವೃಂದಕ್ಕೂ ತಮಗೂ ಅನಂತ ವಂದನೆಗಳು.

○





## ಹೊಸವರುಷದ ಯುಗಾದಿ

– ಶ್ರೀಮತಿ ಶೋಭಾ ಎಸ್. ಕೋಟಿ *

ಎಲ್ಲರಿಗೂ ಯುಗಾದಿ ಹಬ್ಬದ ಸಂಭ್ರಮ. ಉತ್ಸಾಹ, ಸಂತೋಷ. ಈ ವರ್ಷ(೨೦೧೫) ಬಹುಸಂಖ್ಯಾತ ಸನಾತನ ಭಾರತೀಯ ಪ್ರಜೆಗಳು ಧರ್ಮಿಯರು ಮಾರ್ಚ್ ೨೧ರಂದು ಶನಿವಾರ ಯುಗಾದಿಯನ್ನು ಆಚರಿಸುತ್ತೇವೆ. ಗ್ರೆಗೋರಿಯನ್ ಕ್ಯಾಲೆಂಡರ್ ಪ್ರಕಾರ ಪ್ರಪಂಚದ ಬಹುತೇಕ ಭಾಗಗಳಲ್ಲಿ ಜನವರಿ ಒಂದನೇ ತಾರೀಖಿನಂದು ಹೊಸ ವರ್ಷ. ಹಾಗೇ ಹಿಂದೂ ಧರ್ಮೀಯರಿಗೆ ಪ್ರತಿವರ್ಷ ಈ ಯುಗಾದಿಯಲ್ಲಿ ಹೊಸ ವರ್ಷದ ಆರಂಭ.

ಈ ವರ್ಷ ಮಾರ್ಚ್ ೨೧ರಂದು ಆಚರಿಸುವುದನ್ನು ಚಾಂದ್ರಮಾನ ಯುಗಾದಿ ಎಂತಲೂ ಕರೆಯುತ್ತೇವೆ. ಒಂದು ಅಮಾವಾಸ್ಯೆಯ ಅಂತ್ಯದಿಂದ ಮುಂದಿನ ಅಮಾವಾಸ್ಯೆಯ ಅಂತ್ಯದವರೆಗೆ ಕಾಲಾವಧಿಯನ್ನು ಒಂದು ಚಾಂದ್ರಮಾನ (Lunar month) ಎಂದು ಕರೆಯುತ್ತೇವೆ. ಒಂದು ಚಾಂದ್ರ ಮಾಸದ ಕಾಲಾವಧಿ ಸುಮಾರು ೨,೯೫,೩೦,೫೮೯ ದಿನಗಳು. ಈ ಮಾಸ ಗಣನೆಯ ಪದ್ಧತಿಗೆ ಚಾಂದ್ರಮಾನ ಪದ್ಧತಿ ಎನ್ನುತ್ತೇವೆ. ಚಾಂದ್ರಮಾನ ವರ್ಷದಲ್ಲಿ ೧೨ ಚಾಂದ್ರ ಮಾಸಗಳಿದ್ದು ಒಟ್ಟು ಅವಧಿ ೩,೫೪,೩೬,೭೦೬ ದಿನಗಳು ಆ ಮಾಸಗಳು ಚೈತ್ರ ವೈಶಾಖ ಇತ್ಯಾದಿಗಳು. ಚೈತ್ರಮಾಸದ ಮೊದಲ ದಿನ ಅಂದರೆ ಶುಕ್ಲ ಪಕ್ಷದ ಪ್ರತಿಪತ್ ದಿನವೇ ಚಾಂದ್ರವರ್ಷವು ಪ್ರಾರಂಭಿಸುತ್ತದೆ. ಈ ದಿನವನ್ನೇ ಚಾಂದ್ರಮಾನ ಯುಗಾದಿ ಎನ್ನುತ್ತೇವೆ. ನಮ್ಮ ಬಹಳಷ್ಟು ಹಬ್ಬಗಳು ಚಾಂದ್ರಮಾನ ಪದ್ಧತಿಯನ್ನೇ ಅವಲಂಬಿಸಿವೆ. ಮಹಾರಾಷ್ಟ್ರದಲ್ಲಿ ಇದಕ್ಕೆ 'ದುಡಿಪಾಡ್ವ' ಎನ್ನುತ್ತಾರೆ.

ಸಾಮಾನ್ಯವಾಗಿ ಕ್ಷಯಮಾಸವು ೧೪೧ ವರ್ಷಗಳಿಗೊಮ್ಮೆ ಬರುತ್ತದೆ. ಕೆಲವು ಸಾರಿ ೧೯ ವರ್ಷಕ್ಕೆ ಬರುವುದುಂಟು. ಈ ಕ್ಷಯಮಾಸವು ಕಾರ್ತೀಕ ಮಾರ್ಗಶಿರ ಅಥವಾ ಪುಷ್ಯಮಾಸಗಳಲ್ಲಿ ಬರುವುದು. ಯಾವ ಚಾಂದ್ರಮಾನ ವರ್ಷದಲ್ಲಿ ಕ್ಷಯಮಾಸವು ಬರುವುದೋ ಆ ವರ್ಷದಲ್ಲಿ ಎರಡು ಅಧಿಕಮಾಸಗಳನ್ನು ಕಾಣುತ್ತೇವೆ. ಒಂದು ಅಧಿಕ ಮಾಸ ಮೊದಲು ನಂತರ ಇನ್ನೊಂದು ಬರುವುದು. ಒಂದು ಕ್ಷಯಮಾಸದ ಅವಧಿಯಲ್ಲಿ ಎರಡು ಸೂರ್ಯ ಸಂಕ್ರಮಣಗಳಿರುತ್ತವೆ.

ಸಂವತ್ಸರದ ಮೊದಲ ಹಬ್ಬ ಯುಗಾದಿ. ಅಂದರೆ, ಸೃಷ್ಟಿಯ ಆರಂಭ. (ನಮ್ಮ ಜೀವನದ ಮೊದಲ ಕ್ಷಣ) ಇದು ಬರುವುದು ವಸಂತ ಋತುವಿನಲ್ಲಿ. ಯುಗಾದಿಯಂದು ದೇವರಿಗೆ ನಿವೇದಿಸಿದ ಬೇವುಬೆಲ್ಲ ಸೇವಿಸಿ ಬರುವ ಸುಖದುಃಖಗಳನ್ನು ಧೈರ್ಯದಿಂದ ಎದುರಿಸಿ ಗೆಲ್ಲುವ ಸಂಕಲ್ಪ ಮತ್ತು ಸಾಧಿಸಬೇಕಾದ ಸಾಮರಸ್ಯದ ಪ್ರತೀಕ. ಒಟ್ಟಾರೆ ಸಿಹಿಕಹಿಗಳನ್ನು ನಾವು ಯಾವುದೇ ವಿಕಾರಗಳಿಲ್ಲದೇ ಸಮಾನವಾಗಿ ಸ್ವೀಕರಿಸುವುದರಲ್ಲಿಯೇ ನಮ್ಮ ಬದುಕು ಹಬ್ಬವಾಗುವ ಗುಟ್ಟು ಅಡಗಿದೆ. ಶ್ರೀರಾಮಚಂದ್ರ ವನವಾಸದಿಂದ ಹಿಂದಿರುಗಿದ ಸಂಪದ್ಭರಿತವಾದ ದಿನ. ಬದುಕು ಜಟಕಾಬಂಡಿ ವಿಧಿ ಅದರ ಸಾಹೇಬ. ಅದರಲ್ಲಿ ಹುಟ್ಟಿನಿಂದ ಸಾವಿನ ತನಕ ಎಷ್ಟೆಷ್ಟು ನಿಲ್ದಾಣ ಬರುತ್ತೋ ಅಲ್ಲಿ ಸುಖದುಃಖಗಳನ್ನು ಸರಿಸಮಾನವಾಗಿ ನೋಡುವ ತಾಣವೆಂದರೂ ತಪ್ಪೇನಿಲ್ಲ. ನೋವು-ನಲಿವು, ಹಿಗ್ಗು-ಕುಗ್ಗು ಸಮಾನವಾಗಿ ಸ್ವೀಕರಿಸಬಲ್ಲ. ಸ್ಥೈರ್ಯವಿದ್ದವನು ಮಾತ್ರವೇ ಹತ್ತು ತಲೆಗಳ ರಾವಣನನ್ನು ಗೆಲ್ಲಲು ಸಾಧ್ಯ. ಈ ಸಮಸ್ಥಿತಿಯಲ್ಲಿ ಜೀವನ ಸ್ಥೈರ್ಯವೇ ವಿಜಯೋತ್ಸವಕ್ಕೆ ಕಾರಣ. ಶ್ರೀರಾಮಚಂದ್ರನ ವಿಜಯೋತ್ಸವದ ಹೆಮ್ಮೆ ನಮ್ಮ ನಿಮ್ಮೆಲ್ಲರ ಬಾಳಿಗೂ ಯುಗಾದಿಯಾಗಿ, ಉತ್ಸಾಹ, ಸಂಭ್ರಮವಾಗಿ ಇರಲಿ ಎಂದು ಪೂರ್ವಜರ ಹಿತೋಕ್ತಿ, ಅಭಿರುಚಿ, ಆಕಾಂಕ್ಷೆ ಸ್ತುತ್ಯರ್ಹವಾಗಿದೆ.

○

* 'ಶ್ರೀ ಬನಶಂಕರಿದೇವಿ ನಿಲಯ', ಧರ್ಮಗೌಡ ಪೇಟೆ, ಇಳಕಲ್.

# ಸಾರ್ವಜನಿಕರಲ್ಲಿ ಮನವಿ

## ವಚನಕಾರ 'ದೇವರ ದಾಸಿಮಯ್ಯ ಜಯಂತಿ : ಅಪ್ಪಟ ಅಪಚಾರ

### (ಎಲ್ಲರೂ ಪ್ರತಿಭಟಿಸಲು ಮನವಿ)

೧. ದೇವರ ದಾಸಿಮಯ್ಯ ಐತಿಹಾಸಿಕ ವ್ಯಕ್ತಿ – ಇಮ್ಮಡಿ ಜಯಸಿಂಹನ ರಾಣಿ ಸುಗ್ಗಲೆಯ ಗುರು – ಒಬ್ಬ ಶ್ರೇಷ್ಠ ಶಿವಭಕ್ತ. ಅವನ ಕಾಲ ಕ್ರಿ.ಶ. ೧೦೪೦. ಅವನು ಏನೂ ಬರೆದಿಲ್ಲ.

೨. ಜೇಡರ ದಾಸಿಮಯ್ಯನೂ ಐತಿಹಾಸಿಕ ವ್ಯಕ್ತಿ – ನೇಕಾರ ವರ್ಗದ ಶಿವಶರಣ ಮತ್ತು ವಚನಕಾರ. (ಅಂಕಿತ 'ರಾಮನಾಥ') ಅವನ ಪತ್ನಿ ದುಗ್ಗಳೆಯು ಬಸವಣ್ಣ, ಅಲ್ಲಮರನ್ನು ತನ್ನ ವಚನಗಳಲ್ಲಿ ಸ್ಮರಿಸಿರುವುದರಿಂದ ಅವಳ ಕಾಲ ಕ್ರಿ.ಶ. ೧೧೬೦.

೩. ದೇವರ ದಾಸಿಮಯ್ಯ (ಕ್ರಿ.ಶ. ೧೦೪೦), ಜೇಡರ ದಾಸಿಮಯ್ಯ (ಕ್ರಿ.ಶ. ೧೧೬೦) ಇಬ್ಬರೂ ಸ್ಪಷ್ಟವಾಗಿ ಬೇರೆ ಬೇರೆ. ವಚನಕಾರರು ಜೇಡರ ದಾಸಿಮಯ್ಯ, ದುಗ್ಗಳೆಯರನ್ನು ಸ್ಮರಿಸಿರುವರೇ ಹೊರತು ದೇವರ ದಾಸಿಮಯ್ಯನನ್ನು ಅಲ್ಲ.

೪. ಕರ್ನಾಟಕ ಸರ್ಕಾರವು 'ವಚನಕಾರ ದೇವರ ದಾಸಿಮಯ್ಯನ ಜಯಂತಿ' ಆಚರಿಸಲು ೯೩ ಲಕ್ಷ ಮೀಸಲಾಗಿರಿಸಿದೆ ಎಂದು ಸಂಸ್ಕೃತಿ ಸಚಿವೆ ಶ್ರೀಮತಿ ಉಮಾಶ್ರೀ ಹೇಳಿದ್ದಾರೆ. ಇದು ಅನುಚಿತವಾದ ಕಾರ್ಯ. ದೇವರ ದಾಸಿಮಯ್ಯನೇ ವಚನಕಾರ ಎಂದು ಭಾವಿಸಿದರೆ ಜೇಡರ ದಾಸಿಮಯ್ಯ ಪತ್ನಿ ದುಗ್ಗಳೆಯನ್ನು ದೇವರ ದಾಸಿಮಯ್ಯನಿಗೆ ತಳುಕು ಹಾಕಿದಂತಾಗುತ್ತದೆ. ಇದೊಂದು ಸ್ಪಷ್ಟವಾಗಿ ಘೋರ ಅಪಚಾರ.

೫. 'ವಚನಕಾರ' ಜೇಡರ ದಾಸಿಮಯ್ಯ ಜಯಂತಿ ಆಚರಿಸುವುದೇ ಸರಿಯಾದ ಕಾರ್ಯ. ಒಂದು ವೇಳೆ ದೇವರ ದಾಸಿಮಯ್ಯನೇ ವಚನಕಾರ ಎಂದು ಭಾವಿಸಿ ಸರ್ಕಾರವು ಜಯಂತಿ ಆಚರಿಸುವುದಾದಲ್ಲಿ–

೧. ಎಲ್ಲರೂ ಅದನ್ನು ಶಾಂತವಾಗಿ ಪ್ರತಿಭಟಿಸಬೇಕು

೨. ಯಾವ ಉಪನ್ಯಾಸಕಾರರೂ ಉಪನ್ಯಾಸಗಳಿಗೆ ಒಪ್ಪಿಗೆ ನೀಡಬಾರದು.

೩. ಅಂತಹ ಸಮಾರಂಭ ನಡೆಯುವ ಸಭಾಂಗಣದ ಮುಂದೆ ವಿರೋಧವನ್ನು ವ್ಯಕ್ತಪಡಿಸಬೇಕು.

೪. ಪತ್ರಿಕೆಯವರೂ ಮೇಲಿನ ಅನ್ಯಾಯವನ್ನು ಸಾರ್ವಜನಿಕರ ಗಮನಕ್ಕೆ ತರಬೇಕು.

೫. ಸಂಘ ಸಂಸ್ಥೆಗಳವರು ಅಂತಹ ಸಮಾರಂಭಗಳನ್ನು ಖಂಡಿಸಿ ಹೇಳಿಕೆ ಕೊಡಬೇಕು. ಯಾರೂ 'ವಚನಕಾರ ದೇವರ ದಾಸಿಮಯ್ಯ ಜಯಂತಿ' ಆಚರಿಸಬಾರದು.

ಇಷ್ಟು ಸಾರ್ವಜನಿಕರಲ್ಲಿ ನಮ್ಮ ಕಳಕಳಿಯ ಕೋರಿಕೆ. 'ಸತ್ಯವ ನುಡಿವುದೇ ಸ್ವರ್ಗಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ' ಇದು ಎಲ್ಲರ ಆದರ್ಶ.

ಡಾ. ಸಿ.ಯು. ಮಂಜುನಾಥ್
ಡಾ. ಬಿ. ನಂಜುಂಡಸ್ವಾಮಿ
ಡಾ. ಬಸವರಾಜ ಕಲ್ಗುಡಿ
ಶ್ರೀಮತಿ ವಿನೋದ ನಟರಾಜ್

ಡಾ. ಎಂ. ಚಿದಾನಂದಮೂರ್ತಿ
(೦೮೦–೨೩೩೩೦೦೬೮೭)
ಡಾ. ಎಸ್. ವಿದ್ಯಾಶಂಕರ
(೦೮೦–೨೩೩೩೦೨೪೧೭)
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಪ್ರೊ. ಹು.ಕಾ. ಜಯದೇವ್





# ಮಾನವೀಯ ಮೌಲ್ಯಗಳು

– ಶ್ರೀಮತಿ ಬಿ.ಆರ್. ನಾಗರತ್ನ *

ಮೌಲ್ಯವೆಂದರೆ ನೀತಿ ಅಥವಾ ನೈತಿಕತೆ, ಉತ್ತಮ ನಡತೆ, ಸಭ್ಯತೆ, ನಿಯಮಪಾಲನೆ, ಪರಿಶುದ್ಧತೆ, ಸತ್ಯಸಂಧತೆ ಎಂಬರ್ಥಗಳಿವೆ. 'ಮೌಲ್ಯ' ಎಂಬ ಪದಜೀವನದ ಸಾಮಾಜಿಕ, ನೈತಿಕ, ಧಾರ್ಮಿಕ, ಜಾತ್ಯಾತೀತ ಹಾಗೂ ಶೈಕ್ಷಣಿಕ ಮುಂತಾದ ಯಾವುದೇ ರಂಗದ ಅತ್ಯುನ್ನತ ಆದರ್ಶ ವಿಚಾರಗಳ ಸಂಗಮವಾಗಿದೆ. ಮಾನವೀಯ ಮೌಲ್ಯಗಳು ಬಾಳನ್ನು ಬೆಳಗಿಸುವ ಸದ್ಗುಣಗಳು. ಜೀವನ ಪಥದ ದಾರಿ ದೀಪಗಳು. ಅಂಥ ಮೌಲ್ಯಗಳನ್ನು ರೂಢಿಸಿಕೊಂಡಾಗಲೇ ನಮ್ಮದು ಶ್ರೇಷ್ಠ ಜೀವನವೆನಿಸುತ್ತದೆ. ಅಂಥ ಜೀವನ ಸಮಾಜ ಮುಖಿಯಾಗಿ ಸಾಗುತ್ತದೆ.

ಪ್ರಾಚೀನ ಭಾರತೀಯರಲ್ಲಿ ಈ ಮೌಲ್ಯಗಳು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬುದಾಗಿ ಪುರುಷಾರ್ಥಗಳೆನಿಸಿ ಖ್ಯಾತಿ ಪಡೆದಿವೆ. ಆಧುನಿಕ ವಚನಕಾರರೊಬ್ಬರು 'ಮಾನವ ಜನ್ಮ ದೊಡ್ಡದೇನಲ್ಲ ಮಾನವೀಯತೆ ದೊಡ್ಡದು' ಎಂದು ಅರ್ಥಪೂರ್ಣವಾಗಿ ಹೇಳಿದ್ದಾರೆ. ಈ ಮಾನವೀಯತೆ ನಮ್ಮದಾಗಬೇಕಾದರೆ ನಾವು ಮೊದಲು ಮಾನವರಾಗ ಬೇಕಿದೆ. ಬಸವಣ್ಣನವರು ಸಪ್ತಸೂತ್ರಗಳಲ್ಲಿ ಹೇಳಿರುವಂತೆ... ಕಲಬೇಡ ಕೊಲಬೇಡ.... ಒಲಿಸುವ ಪರಿ ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕಾಗಿದೆ. ಈ ಏಳನ್ನು ಅರಿತು ನಡೆದರೆ ನಾವು ಏಳುಲೋಕಗಳಲ್ಲಿ ಯಾವುದಕ್ಕೂ ಅಂಜ ಬೇಕಾಗಿಲ್ಲ. ನಾವು ಇಲ್ಲಿ ಚೆನ್ನಾಗಿ ಬಾಳ್ವೆ ನಡೆಸಿದರೆ ಸಾಕು, ಇಲ್ಲದ ಸ್ವರ್ಗ, ನರಕಗಳ ಕಲ್ಪನೆ ಬೇಕಿಲ್ಲ. ಏಕೆಂದರೆ ಮನುಷ್ಯ ರಾಗಿ ಹುಟ್ಟಿ ಮಾನವರಾಗಿ ಬೆಳೆದು, ಅತಿಮಾನವರಾಗಿ ಹೊಳೆದು ದೇವಮಾನವರೆನಿಸಿದ್ದು ಈ ಮಾನವೀಯ ಮೌಲ್ಯಗಳನ್ನು ಮೈಗೂಡಿಸಿಕೊಂಡಿದ್ದರಿಂದಲೇ ಪರೋಪ ಕಾರಾರ್ಥ ಇದಂ ಶರೀರಂ.

**ದಧೀಚಿಯ ತ್ಯಾಗ :** ವೃತ್ತಾಸುರನೆಂಬ ರಾಕ್ಷಸನನ್ನು ಇಂದ್ರ ಉಪೇಕ್ಷೆ ಮಾಡಿದ್ದರಿಂದ ಅವನು ಬೆಳೆದ ಲೋಕಕಂಟಕನಾದ ಅವನನ್ನು ಸಂಹರಿಸಲು ಸಾಧಾರಣ ಆಯುಧಗಳಿಂದ ಅಸಾಧ್ಯವೆಂದರಿತ ದೇವತೆಗಳು ಹರಿಯ ಸಲ್ಹೆ ಕೇಳಲು ಆಗ ಹರಿ ಅಭೂತಪೂರ್ವಕವಾದ ಮಹರ್ಷಿಯ ಬೆನ್ನುಲುಬಿನ ಮೂಲಕ ಮಾಡಿದ ಆಯುಧವೊಂದೇ ಅವನನ್ನು ಸಂಹರಿಸಲು ಸಾಧ್ಯ ಅಂತಹ ಮಹರ್ಷಿ ದಧೀಚಿ ಎಂದನು. ದೇವತೆಗಳೆಲ್ಲ ದಧೀಚಿಯ ಸಾಮರ್ಥ್ಯವನ್ನು ಬಲ್ಲವರೇ ಆಗಿದ್ದರೂ ನಮ್ಮ ಕೋರಿಕೆಗೆ ಸ್ಪಂದಿಸುತ್ತಾರೆಯೇ ಎಂಬ ಸಂದೇಹವನ್ನು ನಾರದ ಮಹರ್ಷಿಗಳ ಮುಂದೆ ವ್ಯಕ್ತಪಡಿಸುತ್ತಾರೆ. ಆಗ ನಾರದ ಅವರನ್ನು ಸಮಾಧಾನಿಸಿ ದಧೀಚಿಯ ಕಡೆಗೆ ಹೋಗಲು ತಿಳಿಸುತ್ತಾನೆ ಹಾಗೂ ನಿಮ್ಮ ಕೋರಿಕೆ ಈಡೇರುತ್ತದೆಂದು ಧೈರ್ಯ ತುಂಬಿ ಕಳಿಸುತ್ತಾನೆ. ದೇವತೆಗಳ ಬೇಡಿಕೆಯನ್ನು ಶಾಂತರೀತಿಯಿಂದ ಆಲಿಸಿದ ದಧೀಚಿ ಮಹರ್ಷಿಗಳು ನನ್ನಿಂದ ಇನ್ನೊಬ್ಬರ ತೊಂದರೆ ನಿವಾರಣೆಯಾಗುತ್ತದೆಂದ ಮೇಲೆ ನಶ್ವರವಾದ ಶರೀರದ ಮೇಲೆ ಮೋಹ ಏಕೆ ಖಂಡಿತ. ನಿಮ್ಮ ಬೇಡಿಕೆಗೆ ನನ್ನ ಸಮ್ಮತಿ ಇದೆ. ನನ್ನ ದೇಹದಲ್ಲಿ ಯಾವ ಭಾಗ ವನ್ನಾದರೂ ತೆಗೆದುಕೊಳ್ಳಿ ಎಂದು ಅನುಮತಿ ಇತ್ತ. ಆತನ ಬೆನ್ನುಲುಬಿನಿಂದ ಮಾಡಿದ ಆಯುಧವೇ ವಜ್ರಾಯುಧ. ಅದು ಇಂದ್ರನ ಆಯುಧವಾಯ್ತು. ಅದನ್ನು ಉಪಯೋಗಿಸಿ ಕೊಂಡು ದೇವತೆಗಳು ವೃತ್ತಾಸುರನನ್ನು ಸಂಹಾರ ಮಾಡಿದರು.

ಇಲ್ಲಿ ಇನ್ನೊಬ್ಬರ ಕಷ್ಟ ಪರಿಹರಿಸಲು ಸ್ಪಂದಿಸಿದ ಪ್ರತಿಕ್ರಿಯೆ ಉಲ್ಲೇಖನವಾದದು, ಸಾರ್ವಕಾಲಿಕವಾದುದು. 'ಜೀವೋ ಜೀವಸ್ಯಜೀವನಂ' ಸಕಲ ಜೀವನೋದ್ಧಾರಕ್ಕಾಗಿ ನಾವು ಬದುಕಬೇಕು ನಮ್ಮ ಬದುಕು ಎಲ್ಲರ ಬದುಕಾಗ ಬೇಕು. ಜಗದ ಬದುಕಾಗಬೇಕು, ಜಗದ ಸಾವಾಗಬಾರದು. ಜೀವನದುದ್ದಕ್ಕೂ ಮಾನವೀಯ ಮೌಲ್ಯಗಳನ್ನು ಅಳ ವಡಿಸಲು, ರೂಢಿಸಲು ಅನುಕೂಲವಾಗುವಂತೆ ಅನೇಕ

* ಮ.ನಂ. ೧೧೨೫, ೯ನೇ ಮೈನ್, ಗೋಕುಲ ೩ನೇ ಹಂತ, ಮೈಸೂರು–೫೭೦ ೦೦೨.

ಧರ್ಮಗಳು, ಮಹಾತ್ಮರು ಮೌಲ್ಯಗಳ ವಿವರಣೆಗಳನ್ನು ನೀಡಿದ್ದಾರೆ. ಇತ್ತೀಚೆಗೆ ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರಿ ಒಟ್ಟು ೧೧೧೦ ಮೌಲ್ಯಗಳನ್ನು ನಿರ್ಧರಿಸಿದರೆ ಎನ್.ಸಿ.ಈ. ಆರ್.ಟಿ. ಯವರು ೮೩ ಮೌಲ್ಯಗಳನ್ನು ನಿಗದಿಪಡಿಸಿದ್ದಾರೆ. ಅವುಗಳೆಲ್ಲದರ ಸಾರವಾಗಿ ಪ್ರಮುಖ ೫ ಮೌಲ್ಯಗಳನ್ನು ನಾವು ಹೇಳಬಹುದು.

**೧. ಸತ್ಯ** **೨. ಸದಾಚಾರ** **೩. ಶಾಂತಿ**

**೪. ಅಹಿಂಸೆ** **೫. ಪ್ರೇಮ.**

**೧. ಸತ್ಯ** : ಗಾಂಧೀಜಿಯ ಪ್ರಕಾರ ಅಂತರಾತ್ಮನ ನುಡಿ, ಸತ್ಯವನ್ನು ಯಾವಾಗ, ಎಲ್ಲಿ ಹೇಗೆ ಹೇಳಬೇಕೆಂಬುದರ ಅರಿವು ನಮಗಿರಬೇಕು. ಕೆಲವು ಸಾರೆ ಪರಿಸ್ಥಿತಿಗನುಸಾರವಾಗಿ ಸತ್ಯದ ತಲೆ ಮೇಲೆ ಹೊಡೆದಂತೆ ಮಾತನಾಡಬೇಕು. ಸತ್ಯ ಯಾರನ್ನೂ ಸಾಯಿಸುವುದಿಲ್ಲ. ಒಂದು ಆಶ್ರಮದಲ್ಲಿ ತಪಸ್ಸಿಗೆ ಕೂಡಲು ಋಷಿಯೊಬ್ಬ ತಯಾರಿ ನಡೆಸುತ್ತಾ ಕುಳಿತಿದ್ದಾಗ ಒಬ್ಬ ಹೆಣ್ಣುಮಗಳು ಓಡುತ್ತಾ ಬಂದಳು. 'ಯಾರಮ್ಮ ನೀನು ಏಕೆ ಓಡಿ ಬಂದೆ' ಎಂದು ಕೇಳಿದ. 'ಸ್ವಾಮಿ, ದಯವಿಟ್ಟು ನನಗೆ ರಕ್ಷಣೆ ಕೊಡಿ, ನಾಲ್ಕು ಜನರು ನನ್ನ ಹಿಂಬಾಲಿಸುತ್ತಿದ್ದಾರೆ. ಅವರ ಕೈಗೆ ಸಿಕ್ಕರೆ ನನ್ನ ಕತೆ'.. ಎಂದು ಗೋಳಾಡಿದಳು. ಸರಿ ನಿನಗೇನೂ ತೊಂದರೆಯಾಗದಂತೆ ನೋಡಿಕೊಳ್ಳುವ ಭಾರ ನನ್ನದು ನಿಶ್ಚಿಂತೆಯಿಂದಿರು ಎಂದು ಅಭಯವನ್ನಿತ್ತು ಅವಳ ಆತಂಕವನ್ನು ನಿವಾರಿಸಿದ. ಸ್ವಲ್ಪ ಹೊತ್ತಾಗಿರಬಹುದು ನಾಲ್ಕು ಜನ ಗೂಂಡಾಗಳು ಅಲ್ಲಿಗೆ ಬಂದರು. ಬಂದವರೇ, 'ಗುರುಗಳೇ, ಇಲ್ಲಿ ಒಬ್ಬ ಹೆಣ್ಣು ಮಗಳು ಬಂದಳೆ ಅಥವಾ ಈ ದಾರಿಯಲ್ಲಿ ಹೋದಳೇ' ಎಂದು ಪ್ರಶ್ನಿಸಿದರು. ಅವರ ಮಾತನ್ನು ಕೇಳಿದ ಆಶ್ರಮದ ಋಷಿ ಇಲ್ಲಪ್ಪ ಬರಲಿಲ್ಲ... ಹೋದದ್ದು ನೋಡಲಿಲ್ಲ... ನಾನು ಬಹಳ ಹೊತ್ತಿನಿಂದ ಇಲ್ಲೆ ಇದ್ದೇನೆಂದರು. ಹಿರಿಯರು, ಮಿಗಿಲಾಗಿ ತಪಸ್ವಿಗಳು ಸುಳ್ಳು ಹೇಳಲಾರರೆಂದು ತಿಳಿದು ಹೊರಟುಹೋದರು. ಇದನ್ನೆಲ್ಲಾ ನೋಡುತ್ತಿದ್ದ ಶಿಷ್ಯ 'ಅಲ್ಲ ಗುರುಗಳೇ ಇದೆಂಥ ಅನ್ಯಾಯ. ಸುಳ್ಳು ಹೇಳಬಾರದೆಂದು ನೀವು ನನಗೆ ಹೇಳುತ್ತಾ ನೀವೇ... ಹೀಗೆ. ಶಿಷ್ಯೋತ್ತಮ ನೀನು ಹೇಳುವುದೆಲ್ಲಾ ನಿಜವೇ, ಆದರೆ ಸತ್ಯ ಇನ್ನೊಬ್ಬರನ್ನು ಸಾಯಿಸುವಂತಾಗ ಬಾರದು. ಈಗ ನಾನೇನಾದರೂ ಸತ್ಯ ಹೇಳಿದ್ದರೆ ಆ ನೀಚರು ಹುಡುಗಿಯನ್ನು ಬಿಡುತ್ತಿರಲಿಲ್ಲ. ರಕ್ಷಣೆಗೋಸ್ಕರ ಸುಳ್ಳು ಹೇಳಿದ್ರೆ ತಪ್ಪಿಲ್ಲ' ಎಂದರು.

ಸತ್ಯವೇ ನಮ್ಮ ತಾಯಿ-ತಂದೆ... ಪುಣ್ಯಕೋಟಿ ಹೇಳಿದರೆ; ಸತ್ಯವ ನುಡಿವುದೇ ಸ್ವರ್ಗಲೋಕ ಮಿತ್ಯವ ನುಡಿವುದೇ ಮರ್ತ್ಯಲೋಕ... ಬಸವಣ್ಣ.

**೨. ಸದಾಚಾರ** : ಕ್ರಮಬದ್ಧತೆ; ಆರೋಗ್ಯಕರ ಅಭ್ಯಾಸ, ಉತ್ತಮ ನಡವಳಿಕೆ, ನುಡಿದಂತೆ ನಡೆ, ನಡೆಗೂ ನುಡಿಗೂ ಅಂತರವಿರಬಾರದೆಂಬ ಶರಣರ ಸಂದೇಶ.

**ಶಿಬಿ ಚಕ್ರವರ್ತಿಯ ಕಥೆ** : ಬೇಡನ ಕೈಯಿಂದ ತಪ್ಪಿಸಿಕೊಂಡು ಬಂದ ಪಾರಿವಾಳ ಶಿಬಿ ಚಕ್ರವರ್ತಿಯ ಹತ್ತಿರ ರಕ್ಷಣೆ ಕೇಳಿತು. ಪ್ರಾಣಭಿಕ್ಷೆ ಬೇಡಿತು. ತನ್ನ ಆಶ್ರಯ ಬೇಡಿ ಬಂದ ಪಾರಿವಾಳವನ್ನು ಬೇಡನ ಕೈಗೆ ಒಪ್ಪಿಸಲು ಒಪ್ಪದ ಶಿಬಿಯನ್ನು ಬೇಟೆಗಾರ ಅದರಷ್ಟೇ ತೂಕದ ಮಾಂಸವನ್ನು ಕೇಳಿದ. ಅದಕ್ಕೊಪ್ಪಿದ ಶಿಬಿ ತನ್ನ ದೇಹದ ಮಾಂಸವನ್ನು ಕತ್ತರಿಸಿ ಹಾಕುತ್ತಾ ಹೋದರೂ ಪಾರಿವಾಳದ ಮಾಂಸದ ತೂಕಕ್ಕೆ ಸರಿಹೊಂದದೆ ಕುತ್ತಿಗೆಯವರೆಗೆ ಬಂದಾಗ ಪರಮಾತ್ಮ ಅವನ ಸದಾಚಾರ ಹೊಗಳಿ ಲೋಕದಲ್ಲಿ ಅವನ ಹೆಸರು ಅಜರಾಮರವಾಗಿರುವಂತೆ ಮಾಡುತ್ತಾನೆ.

**ಗುರುನಾನಕರ ಕಥೆ** : ಒಂದು ಸಾರಿ ಗುರುನಾನಕರ ತಂದೆ ತನ್ನ ಮಗನನ್ನು ಕರೆದು ಒಳ್ಳೆಯ ಹಣ್ಣುಗಳನ್ನು ತರುವಂತೆ ಪೇಟೆಗೆ ಕಳುಹಿಸಿದರು. ತಂದೆಯ ಕೋರಿಕೆಯಂತೆ ಗುರುನಾನಕರು ಪೇಟೆಗೆ ಹೋಗಿ ರಸಭರಿತವಾದ ಹಣ್ಣುಗಳನ್ನು ಕೊಂಡು ಮನೆಗೆ ಬರುತ್ತಿದ್ದಾಗ ಒಂದು ಗುಡಿಸಿಲಿನ ಮುಂದೆ ಮೂರು ಮಕ್ಕಳು ಕುಳಿತಿದ್ದರು. ಅವರನ್ನು ನೋಡಿ ದರೆ ಊಟ ಮಾಡಿ ಬಹಳ ದಿನಗಳಾದಂತೆ ಕಂಡು ಬರುತ್ತಿತ್ತು. ಮುಂದೆ ಹೋಗಬೇಕೆಂದುಕೊಂಡಿದ್ದ ನಾನಕರು ಮಕ್ಕಳ ಹತ್ತಿರ ಬಂದು ಮನೆಯಲ್ಲಿ ಯಾರೂ ಇಲ್ಲವೇ ಎಂದು ಪ್ರಶ್ನಿಸಿದರು. ಇಲ್ಲದೆ ಏನು ಅಮ್ಮ ಅಡಿಗೆ ತಯಾರಿ ಮಾಡುತ್ತಿದ್ದಾಳೆ ನೀವು ಕುಳಿತುಕೊಳ್ಳಿ. ನಿಮಗೂ ಊಟ ಕೊಡುತ್ತೇವೆ ಎಂದರು. ನಾನಕರು ಮನೆಯನ್ನೆಲ್ಲಾ ಒಂದು





ಸಾರಿ ವೀಕ್ಷಿಸಿದರು ಯಾವ ಕಡೆಯಿಂದ ನೋಡಿದರೂ ಅನುಕೂಲಕರವಾದ ವಾತಾವರಣ ಇರಲಿಲ್ಲ. ಬಾಗಿಲಿಗೆ ಹಾಕಿದ ಪರದೆ ಹಿಂದೆ ಏನೋ ಸಪ್ಪಳ ಬರುತ್ತಿತ್ತು. ಏನೋ ನೋಡಿದವನಂತೆ ಆ ಕಡೆ ಹೋದ. ಅಲ್ಲಿ ಆ ಮಕ್ಕಳ ತಾಯಿ ಒಲೆಯ ಮೇಲೆ ಒಂದು ಪಾತ್ರೆ ಇಟ್ಟು ಸುಮ್ಮನೆ ತಿರುವುತ್ತಿದ್ದಾಳೆ. ಆ ಪಾತ್ರೆಯಲ್ಲಿ ಯಾವ ಧಾನ್ಯವಾಗಲೀ, ತರಕಾರಿಯಾಗಲೀ ಕಾಣುತ್ತಿಲ್ಲ ಬರೀ ನೀರು. ಕಾರಣ ಕೇಳಿದಾಗ ಆ ತಾಯಿ ಕೊಟ್ಟ ಉತ್ತರ ನಾನಕರನ್ನು ದಿಗ್ಭ್ರಮೆ ಹುಟ್ಟಿಸಿತು. 'ಸ್ವಾಮಿ ಮನೆಯಲ್ಲಿ ಏನೂ ಇಲ್ಲ ಎಂಬ ವಿಷಯ ಹೊತ್ತು. ಆದರೆ ಅಡಿಗೆ ಮಾಡುತ್ತಿದ್ದೇನೆಂಬ ಆಸೆ ಮಕ್ಕಳಲ್ಲಿ ಬಂದರೆ ಸಾಕು ಅದರಲ್ಲೇ ಅವು ತೃಪ್ತಿ ಕಾಣುತ್ತಾ ನಿದ್ದೆ ಹೋಗುತ್ತವೆ' ಎಂದಳು. ಅವಳ ಉತ್ತರ ವನ್ನು ಕೇಳಿದ ನಾನಕರು ತಾವು ತಂದಿದ್ದ ಹಣ್ಣುಗಳನ್ನು ಮಕ್ಕಳಿಗೆಲ್ಲ ಹಂಚಿಬಿಟ್ಟ, ಅವುಗಳನ್ನು ಪಡೆದು ಮಕ್ಕಳು ಸಂತೋಷದಿಂದ ಕುಣಿದು ಕುಪ್ಪಳಿಸಿದವು. ಅದನ್ನು ನೋಡುತ್ತಾ ತಾನು ಮನೆಗೆ ಹಿಂತಿರುಗಿದ.

ಬರಿಕೈಯಲ್ಲಿ ಮನೆಗೆ ಬಂದ ಮಗನನ್ನು ಕಂಡ ತಂದೆ ಕೋಪದಿಂದ ಕೂಗಾಡಿದಾಗ ನಾನಕರು ತಾನು ಕಂಡ, ಉಂಡ, ಅನುಭವವನ್ನು ತಂದೆಗೆ ಹೇಳುತ್ತಾ 'ನಾನು ಹಣ್ಣು ಆ ಮಕ್ಕಳಿಗೆ ಇತ್ತಾಗ ಅವರುಗಳ ಕಣ್ಣಲ್ಲಿ ಕಂಡ ಹೊಳಪು, ತಾಯಿಯ ಕಣ್ಣಲ್ಲಿ ಕಂಡ ಕೃತಜ್ಞತೆ ನಾನೆಂದೂ ಮರೆಯಲಾರೆ.... ಅಪ್ಪಾ ಈಗ ಹೇಳಿ ನಾನು ಮಾಡಿದ್ದು ತಪ್ಪೇ'.. ಎಂದ.

ಮಗನ ಮಾತನ್ನು ಕೇಳಿದವರೇ ತಂದೆ ಅವನನ್ನು ಅಪ್ಪಿ ಆಶೀರ್ವದಿಸಿದರು. ನಿನ್ನ ಅಂತರ್ಯದಲ್ಲಿನ ಅನುಕಂಪ, ಸದಾಚಾರಕ್ಕೆ ಎಡೆಮಾಡಿತೆಂದು ಹೇಳಿ ಆಶೀರ್ವದಿಸಿದರು.

**೩. ಶಾಂತಿ** : ಪ್ರಸನ್ನತೆ, ಕಷ್ಟಸಹಿಷ್ಣುತೆ, ಹರ್ಷಚಿತ್ತತೆ, ನಯ, ವಿನಯ.

ಬೌದ್ಧ ಭಿಕ್ಷು-ಚೇಳಿನ ಕತೆ : ನೀರಿನಲ್ಲಿ ಬಿದ್ದು ಒದ್ದಾಡುತ್ತಿದ್ದ ಚೇಳನ್ನು ರಕ್ಷಿಸಲು ಹೋದಾಗ ಪ್ರತಿಸಾರಿ ಅದರಿಂದ ಕಚ್ಚಿಸಿಕೊಂಡು ಯಾತನೆ ಅನುಭವಿಸಿದರೂ ಕೊನೆಯಲ್ಲಿ ಅದು ಅಪಾಯದ ಗಡಿ ದಾಟಿ ಹೋದಾಗ, ಸಂತಸದಿಂದ ಚಪ್ಪಾಳೆ ತಟ್ಟಿ ತಾನೊಂದು ಜೀವಿಯನ್ನುಳಿಸಿದೆ ಎಂದು ಬೌದ್ಧ ಭಿಕ್ಷು ಹೆಮ್ಮೆ ಪಟ್ಟುಕೊಳ್ಳುತ್ತಾರೆ. ಕಚ್ಚಿದರೂ ಕಾಪಾಡುವ ರೀತಿ ಏಕೆಂದು ಪ್ರಶ್ನಿಸಿದವರಿಗೆ 'ಕಚ್ಚುವುದು ಅದರ ಸಹಜಕ್ರಿಯೆ' ಸೃಷ್ಟಿಯಲ್ಲಿರುವ ಎಲ್ಲಾ ಜೀವಗಳಿಗೂ ಒಂದೊಂದು ಕ್ರಿಯೆಯಿದ್ದಂತೆ. ಆದರೆ ಅದನ್ನು ನಾವು ದಬ್ಬಾಳಿಕೆ ಎಂದು ತಿಳಿಯದೆ ನಮ್ಮ ಅಂತರ್ಯದಲ್ಲಿರುವ ಸಹನೆ, ಶಾಂತಿಯ ಕಡೆ ಗಮನಹರಿಸಬೇಕು ಹಾಗೂ ನಾವುಗಳು ಶಕ್ತಿವಂತ ಆಗಿದ್ದುಕೊಂಡು ಅಸಹಾಯಕರನ್ನು ಹಿಂಸಿಸದಿರುವುದು.

**೪. ಅಹಿಂಸೆ** : ಪ್ರಾಣಿ ಸಸ್ಯಗಳಿಗೆ ಹಾನಿ ಮಾಡದಿರುವುದು. ಇತರರ ಭಾವನೆಗಳನ್ನು ಗೌರವಿಸುವುದು. ಪರಸ್ಪರ ಅರ್ಥೈಸಿಕೊಳ್ಳುವುದು. ಕೊಲ್ಲುವವನೇ ಮಾದಿಗ ಹೊಲಸು ತಿಂಬುವವನೇ ಹೊಲೆಯ.

**ಕಥೆ** : ಮಹಮದ್ ಪೈಗಂಬರ್ ಹೊರಗಡೆ ಹೋಗುವ ದಾರಿಯಲ್ಲಿ ಒಂದು ಮಹಡಿಯ ಮೇಲಿಂದ ಒಬ್ಬ ವ್ಯಕ್ತಿ ತ್ಯಾಜ್ಯವಸ್ತುಗಳನ್ನು ಹೊರಗೆಸೆಯುತ್ತಿದ್ದ (ಪೈಗಂಬರ್ ಬರುವ ದಾರಿಯಲ್ಲಿ ಅದೇ ಸಮಯದಲ್ಲಿ) ಆ ವ್ಯಕ್ತಿ ಎಸೆದ ಕಸವನ್ನು ಸರಿಸುತ್ತಾ ಮುಂದೆ ಹೋಗುತ್ತಿದ್ದ ಪೈಗಂಬರ್ ಕೋಪ ಕಟ್ಟಿಕೊಳ್ಳಲೇಯಿಲ್ಲ. ಹೀಗೆ ಎಷ್ಟೋ ದಿನ ನಡೆಯುತ್ತಿತ್ತು. ಒಂದು ದಿನ ಪೈಗಂಬರ್ ಹೋಗು ವಾಗ ಅವರ ಮೇಲೆ ಕಸ ಬೀಳಲಿಲ್ಲ. ಆಶ್ಚರ್ಯದಿಂದ ಅಕ್ಕಪಕ್ಕದವರನ್ನು ವಿಚಾರಿಸಿ, ಅಯ್ಯೋ, ಸ್ವಾಮಿ ಅವನು ನಿಮಗೆ ಪ್ರತಿದಿನ ಹಿಂಸೆ ಕೊಟ್ಟಿದ್ದಕ್ಕೆ ದೇವರು ತಕ್ಕಶಾಸ್ತಿ ಮಾಡಿದ ಎಂದರು. ಅವರಾಡಿದ ಮಾತುಗಳನ್ನು ಕೇಳಿದ ಪೈಗಂಬರ್ ಆರೋಗ್ಯ ಸರಿಯಿಲ್ಲವೆಂದು ತಿಳಿದ ತಕ್ಷಣ ತಡಮಾಡದೆ ಅವನ ಮನೆಗೆ ಹೋದರು. ತಾನು ಕೆಡಕನ್ನು ಮಾಡಿದರೂ ಅದನ್ನು ಗಮನಿಸದೆ ಕೋಪಗೊಳ್ಳದೆ ತನ್ನ ಆರೋಗ್ಯ ವಿಚಾರಿಸಿಕೊಳ್ಳಲು ಬಂದ ವಿಶಾಲ ಗುಣವುಳ್ಳವ ರನ್ನು ಕಂಡು ಮನಸ್ಸಿನಲ್ಲೇ ನಾಚಿಕೆ, ಸಂಕೋಚಪಟ್ಟು ಕೊಂಡು ಆ ವ್ಯಕ್ತಿ ಕ್ಷಮೆ ಕೇಳಿದ. ಆವತ್ತಿನಿಂದ ಆ ಕಾರ್ಯ ನಿಲ್ಲಿಸಿದ. (ಎಂಜಲು ಉಗಳಿದ ಕಥೆ)

**೫) ಪ್ರೇಮ** : ಸ್ನೇಹಪರತೆ, ಸಹಾನುಭೂತಿ, ಅಸಹಾಯಕರ ಬಗ್ಗೆ ಕರುಣೆ, ನೊಂದವರಿಗೆ ಸಹಾಯ ಹಸ್ತ, ತಾನುರಿದು

ಜಗತ್ತಿಗೆ ಬೆಳಕನ್ನು ತೋರಿಸಬಲ್ಲ ಸ್ವಚ್ಛ ಕರ್ಪೂರದಂತೆ ಬದುಕಬೇಕು. ಕಲ್ಲು ಒಡೆಸಿಕೊಂಡ ಮರ ಹಣ್ಣು ಕೊಡುವಂತೆ ನಾವು ಆಗಬೇಕು.

ಒಬ್ಬ ಶ್ರೀಮಂತ ತನ್ನ ಆಸೆಯಂತೆ ಬಹಳ ದೊಡ್ಡದಾದ ಬಂಗಲೆಯೊಂದನ್ನು ಕಟ್ಟಿಸಿದ. ಅದರ ಕೆಲಸವೆಲ್ಲಾ ಮುಗಿದು ಗೃಹಪ್ರವೇಶ ಮಾಡುವ ಮೊದಲು ಮೇಲೆ ನಿಂತು ತನ್ನ ಬಂಗಲೆ ಹೇಗೆ ಕಾಣುತ್ತದೆಯೋ ಎಂಬ ಬಯಕೆಯಿಂದ ಮಹಡಿ ಹತ್ತಿ ಸುತ್ತಲೂ ನೋಡಿದ, ಅವನ ಇಚ್ಛೆಯಂತೆ ಸುತ್ತೆಲ್ಲವೂ ಸುಂದರವಾಗಿತ್ತು. ಮನಮೋಹಕ ವಾಗಿತ್ತು. ಆದರೆ ಅವನ ಬಂಗಲೆಗೆ ಹೊಂದಿಕೊಂಡಂತೆ ಒಂದು ಹಳೆಯದಾದ ಗುಡಿಸಲು ಅವನ ಕಣ್ಣಿಗೆ ಬಿದ್ದು ಮನಕ್ಕೆ ಕಸಿವಿಸಿಯಾಯಿತು. ಕೆಳಗಿಳಿದು ಬಂದವನೇ ಅಲ್ಲಿದ್ದ ಕೆಲಸಗಾರರಿಂದ ಆ ಗುಡಿಸಿಲಿನಲ್ಲಿ ಒಬ್ಬ ಮುದುಕಿ ವಾಸವಾಗಿದ್ದಾಳೆಂದು ತಿಳಿದುಕೊಂಡ. ಅವಳಿಗೆ ಒಂದಿಷ್ಟು ಹಣ ಬಿಸಾಕಿ ಆ ಜಾಗವನ್ನು ತೆಗೆದುಕೊಂಡು ಅದನ್ನು ಹೊಡೆದು ಹಾಕಿದರೆ ಎಂಬ ಆಲೋಚನೆ ಬಂದು ತಡಮಾಡದೆ ತಕ್ಷಣ ಆ ಮುದುಕಿ ಇದ್ದರೆ ಇಲ್ಲಿಗೆ ಕರೆದುಕೊಂಡು ಬನ್ನಿ ಎಂದು ತನ್ನ ಆಳುಗಳನ್ನು ಕಳುಹಿಸಿದ.

ಶ್ರೀಮಂತರ ಅಣತಿಯಂತೆ ಹೋದ ಆಳುಗಳು ಸ್ವಲ್ಪ ಹೊತ್ತಿನಲ್ಲೇ ಹಿಂದಿರುಗಿ ಬಂದರು. ನಿಮ್ಮ ಯಜಮಾನ ಎಷ್ಟೋ ಶ್ರೀಮಂತನಾಗಿದ್ದರೂ ಅದು ನಿಮಗೆ ನನಗಲ್ಲ. ಅದರೇ ಬೇಕಾದರೆ ಬರಲಿ ಎಂದು ಹೇಳಿ ಕಳುಹಿಸಿದಳೆಂಬ ಸಮಾಚಾರವನ್ನು ಹೊತ್ತು ತಂದರು. ಅದನ್ನು ಕೇಳಿದ ಶ್ರೀಮಂತನಿಗೆ ಕೋಪ ಉಕ್ಕಿ ಬಂತು. ಎಂಥಾ ಸೊಕ್ಕು ಅವಳಿಗೆ ಎಂದು ಹೂಂಕರಿಸುತ್ತಲೇ ಅವಳ ಗುಡಿಸಲಿಗೆ ಹೋದ. ಹೊರಗಿನಿಂದ ಶ್ರೀಮಂತ 'ಎಲ್ಲೇ... ಮುದುಕಿ ಹೊರಗೆ ಬಾ ನೀ ಏನು ಹೇಳಿ ಕಳುಹಿಸದೆ ನನ್ನ ಸೇವಕರ ಹತ್ತಿರ, ಅದೆಷ್ಟು ಬಾಳುತ್ತೇ ಹೇಳು' ನೋಡೋಣವೆಂದು ಸವಾಲು ಹಾಕಿದ. ಒಳಗಿನಿಂದ ನಿಧಾನವಾಗಿ ಬಂದ ಮುದುಕಿ 'ಓಹೋ ನೀವೇನೋ ಆ ಶ್ರೀಮಂತ' ಎಂದಳು. ಆ ಮುದುಕಿಯನ್ನು ಅಪಾದಮಸ್ತಕದವರೆಗೂ ನೋಡಿದ ಕೂಡಲೇ ಮನದಲ್ಲಿ ನಗೆ ಉಕ್ಕಿ ಬಂತು. ದೂಕಿದರೆ ಬಿದ್ದು ಹೋಗುವಷ್ಟು ಜೀರ್ಣವಾಗಿದೆ ದೇಹ ಹಾಗೆ ಅವಳಿರುವ ಗುಡಿಸಲೂ ಅಷ್ಟೆ. ಆದರೂ ಎಷ್ಟು ಸೊಕ್ಕಿನ ಮಾತುಗಳೆಂದುಕೊಂಡ. 'ಏಕೆ ಹಾಗೆ ನಿಂತಿಬಿಟ್ಟಿ, ನಾ ಕೇಳಿದ ಬೆಲೆಯನ್ನು ನೀವು ಕೊಡುತ್ತೀರಾ.... ಕೇಳಿ ಇಲ್ಲಿ ಸುಮಾರು ವರ್ಷಗಳಿಂದ ಮದುವೆಯಾಗಿ ಮಧುಮಗಳಾಗಿ ಪಡಿಯಿಕ್ಕಿ ಒದ್ದು ಒಳಗಡಿಯಿಟ್ಟಿದ್ದೆ. ನನ್ನ ಕೈ ಹಿಡಿದವ ನೊಡನೆ ಪ್ರೀತಿ ನಂಬಿಕೆ ವಿಶ್ವಾಸಗಳಿಂದ ಬಾಳ್ವೆ ನಡೆಸಿದೆ. ಮಕ್ಕಳ ಹಡದೆ ಅವರುಗಳೊಡನೆ ಪ್ರೀತಿ, ವಾತ್ಸಲ್ಯಗಳನ್ನು ಉಣಬಡಿಸಿದೆ. ನಾನೂ ಉಂಡೆ. ಈವತ್ತು ಮಕ್ಕಳು ರೆಕ್ಕೆ ಬಲಿತು ಹಾರಿ ಹೋಗಿರಬಹುದು. ನನ್ನವರು ಆಯಸ್ಸು ಮುಗಿದು ಹೋಗಿದ್ದಾರೆ. ಆದರೆ ನನ್ನೆಲ್ಲಾ ಬದುಕಿನ ಸಿಹಿ ಕಹಿಗಳ ಹೆಜ್ಜೆಯ ಗುರುತು ಇಲ್ಲಿ ಅಳಿಸಲಾಗದೆ ಒಡ ಮೂಡಿವೆ. ಹೇಳಿ ಇವಕ್ಕೆಲ್ಲ ಎಷ್ಟು ಬೆಲೆ ಕಟ್ಟುತ್ತೀರಾ...' ಎಂದಳು. ಶ್ರೀಮಂತನಿಗೆ ಅಹಂ ಇಳಿದು 'ಇಲ್ಲಾ ತಾಯಿ ಹಣದ ಮದದಿಂದ ಕುರುಡಾಗಿದ್ದೆ. ಇಂಥವರು ನನ್ನ ಬಂಗಲೆಯ ಪಕ್ಕದಲ್ಲಿ ವಾಸ ಮಾಡುತ್ತಿರುವುದೇ ನನ್ನ ಪುಣ್ಯ. ತೊಂದರೆ ಕೊಟ್ಟಿದ್ದಕ್ಕೆ ಕ್ಷಮೆ ಇರಲೆಂದು' ಹೇಳಿ ಹೊರಟು ಹೋದನು. ಇಲ್ಲಿ ಭಾವನಾತ್ಮಕವಾದ ಬದುಕು ಆ ಮುದುಕಿಯದು.

ಮೌಲ್ಯಯುಕ್ತ ಬದುಕ ಬದುಕಿ, ನಿನ್ನೆಯವರಾಗಿ ಇಂದಿನವರಾಗಿ, ನಾಳೆಯವರೂ ಆಗೋಣ ಮಾನವೀಯ ಮೌಲ್ಯಗಳನ್ನು ಮೇಳೈಸಿಕೊಂಡು ಲೋಕದ ಸಾವಾಗದೆ ಬದುಕೋಣ. ನೆರೆಹೊರೆಯವರಿಗೆ ಹೊರೆಯಾಗದೆ, ಹೂವಾಗಿ ಅವರ ಕಣ್ಣೀರಿಗೆ ಕಾರಣರಾಗದೆ ಸಂತೋಷದ ಪನ್ನೀರಿಗೆ ಕಾರಣರಾಗೋಣ. ಕಸ್ತೂರಿಮೃಗ ತನ್ನ ಸುಗಂಧವನ್ನ ಅರಿಯದೆ ಬೇರೆಲ್ಲೋ ಸುಗಂಧಕ್ಕಾಗಿ ಮೂರ್ಖತನದಿಂದ ಹುಡುಕುವಂತಾಗಬಾರದು. ಹಾಗೇ, ನಮ್ಮಲ್ಲಿರುವ ಮೌಲ್ಯಗಳನ್ನು ಹೊರಗೆಲ್ಲೋ ಹುಡುಕದೆ ಒಳಗಿನ ಒಳಹನ್ನು ಪಡೆದು ಪ್ರಕಾಶಿಸೋಣ. ಹಾಗೇ ಭಾವನಾತ್ಮಕ ವಾದ ಬದುಕು ನಮ್ಮದಾಗಬೇಕು.

(ಕೃಪೆ : ಬಣಜಿಗಬಂಧು- ಪುಟ ೧೨-೧೫ ಸಂಪುಟ ೩, ಸಂಚಿಕೆ ೭, ಮಾರ್ಚ್ ೧೫)

○





# ಅಜ್ಞಾತ ವಚನಕಾರ ಪ್ರಸಾದಿ ಲೆಂಕ ಬಂಕಣ್ಣ

- ಎಚ್.ಎಸ್. ಸಿದ್ಧಗಂಗಪ್ಪ *

**ಶ**ರಣ ಪ್ರಸಾದಿ ಲೆಂಕ ಬಂಕಣ್ಣ ಬಸವಣ್ಣನವರ ಸಮಕಾಲೀನ. ಈತನ ಕಾಲ ೧೧೬೦. ಬಂಕಣ್ಣ ಹೆಸರಿನ ಶರಣರು ಅನೇಕರಿರುವುದರಿಂದ ಪ್ರಸಾದಿ ಲೆಂಕ ಬಂಕಣ್ಣನ ಇತಿಹಾಸವನ್ನು ಗುರುತಿಸುವುದು ತುಂಬಾ ತೊಡಕಿನದಾಗಿ ಕಂಡು ಬರುತ್ತದೆ. ಶಿವತತ್ವ ಚಿಂತಾಮಣಿ ಹಾಗೂ ಸಿಂಗಿರಾಜ ಪುರಾಣಗಳ ವೀರಬಂಕಯ್ಯ, ನಿಜಲಿಂಗವೀರ ಪ್ರಸಾದಿ ವೀರಬಂಕಣ್ಣ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದ ಪ್ರಸಾದಿ ಬಂಕಯ್ಯ, ಗುರುರಾಜ ಚಾರಿತ್ರ್ಯದ ಪ್ರಸಾದಿ ಬಂಕಯ್ಯ, ಪಂಡಿತಾರಾಧ್ಯ ಚರಿತದ ಪ್ರಸಾದಿ ಬಂಕಯ್ಯ, ಹರಿಹರನ ಲಿಂಗಾರ್ಚನೆ ರಗಳೆಯ ಬಂಕಯ್ಯ ರಲ್ಲಿ ವಚನಕಾರ ಪ್ರಸಾದಿ ಲೆಂಕ ಬಂಕಣ್ಣ ಯಾರೆಂದು ಹೇಳುವುದು ಕಷ್ಟದ ಕೆಲಸ. ಹೀಗಾಗಿ ಇವನ ಬಗೆಗಿನ ನಿಖರವಾದ ವಿವರಗಳನ್ನು ಸಂಗ್ರಹಿಸಲು ಸಾಧ್ಯವಾಗುತ್ತಿಲ್ಲ. ಈತನ ೧೧ ವಚನಗಳು ದೊರಕಿದ್ದು, 'ದಹನ ಚಂಡಿಕೇಶ್ವರ ಲಿಂಗ' ಅಂಕಿತದಲ್ಲಿ ವಚನ ರಚಿಸಿದ್ದಾನೆ. ಪ್ರಸಾದಿಗಳಾದವರ ಸೇವೆ ಮಾಡುವುದೇ ಇವನ ಕಾಯಕವೆಂದು ಕಂಡುಬರುತ್ತದೆ. ಅಷ್ಟಾವರಣಗಳಲ್ಲಿ ಒಂದಾದ ಪ್ರಸಾದದ ಮಹತ್ವವನ್ನು ತನ್ನ ವಚನಗಳಲ್ಲಿ ಪ್ರಸಾದಿ ಲೆಂಕ ಬಂಕಣ್ಣ ಪ್ರತಿಪಾದಿಸಿದ್ದಾನೆ. ಅರ್ಪಿತ-ಅನರ್ಪಿತ ಪ್ರಸಾದ, ಕಾಯಕ ಇವುಗಳನ್ನು ಕುರಿತ ತಾತ್ವಿಕ ವಿವೇಚನೆಯೂ ವಚನಗಳಲ್ಲಿ ಕಂಡು ಬರುತ್ತದೆ. ಈತನ ವಚನಗಳನ್ನು ವಿಶ್ಲೇಷಿಸುವ ಮುನ್ನ ಪ್ರಸಾದ-ಪ್ರಸಾದಿಯ ಅರ್ಥವನ್ನು ಪರಾಮರ್ಶಿಸುವುದು ಸೂಕ್ತವೆನಿಸುತ್ತದೆ.

ಅಷ್ಟಾವರಣಗಳಲ್ಲಿ ಒಂದಾದ ಪ್ರಸಾದ, ಷಟ್‌ಸ್ಥಲಗಳಲ್ಲಿ ಮೂರನೆ ಹಂತ. ಪ್ರಸಾದಿ ಸ್ಥಲದಲ್ಲಿ ಪ್ರಸಾದ ಮತ್ತು ಪ್ರಸಾದಿಯ ಮಹತ್ವವನ್ನು ವಿವೇಚಿಸಲಾಗಿದೆ. ಪ್ರಸಾದ ಪ್ರಭಾವವೆಂದರೆ ಮಹಾಲಿಂಗವಾಗುವುದಾಗಿದೆ. ಪರಶಿವ ಸ್ವರೂಪವೇ ಪ್ರಸಾದ. ಮಹಾಲಿಂಗ ಅಂದಮೇಲೆ ಅವೆರಡೂ ಅಭಿನ್ನವೆ. ಭಾವ ಪ್ರಸಾದದಿಂದ ಪ್ರಸಾದವೂ 'ಪ್ರಸಾದ ಲಿಂಗ'ವಾಗಿ ಪರಿಣಮಿಸುತ್ತದೆ. ಲಿಂಗಕ್ಕೆ ಅರ್ಪಿತವಾದದ್ದು. ಪ್ರಸಾದ, ಅಂದರೆ ಪ್ರಸಾದವೇ ಲಿಂಗವಾಗುವಂಥದು. ಒಂದು ಸದ್ರೂಪ ದೃಶ್ಯ. ಮತ್ತೊಂದು ಚಿದ್ರೂಪದೃಶ್ಯ.

ಪ್ರಸಾದ-ಪ್ರಸಾದಿಯಲ್ಲಿ ಪ್ರಸಾದವನ್ನು ಪ್ರಾಣವಾಗಿ ಅವಲಂಬಿಸಿರುವುದು ಸ್ಪಷ್ಟ. ಈ ಸಂಬಂಧದಲ್ಲಿ ಚನ್ನಬಸವಣ್ಣನನ್ನು ಅನುಸರಿಸಿ ಹೇಳಿದಂತೆ. ವಿಶೇಷಾರ್ಥ ಪ್ರಕಾಶಿಕೆಯನ್ನು ಜಗತ್ತು ಪದಾರ್ಥ, ಜೀವ ಪ್ರಸಾದ, ಈಶ್ವರ ಪ್ರಸಾದ ಎಂದಿದ್ದಾರೆ. ಜಗತ್ತಿನೊಳಗಣ ಬಾಳು ಶಿವ ನೀಡಿದ ಪ್ರಸಾದ. ಪ್ರಸಾದಿ ಅದನ್ನು ಸಾರ್ಥಕವಾಗಿ ಪಡೆದುಕೊಳ್ಳಬೇಕು.

ಈ ಪದಾರ್ಥವನ್ನು ಜಗತ್ತು ಭ್ರಾಂತಿ ಮಾಡಿಕೊಳ್ಳಬಾರದು. ಹಾಗೆ ಮಾಡಿಕೊಂಡರೆ ಅಶುದ್ಧಿಯಾಗುತ್ತದೆ. ಅದಾಗಿ ಜೀವನು ಪ್ರಸಾದವಾಗಬೇಕಾದರೆ ತ್ರಿಕರಣ ಶುದ್ಧಿಯಿಂದ ಗುರುದೇವನ ಅನುಗ್ರಹದಿಂದ ಪ್ರಸಾದ ಪಡೆದು ಪ್ರಸಾದಿಯಾಗಬೇಕು. ಚೆನ್ನಬಸವಣ್ಣನವರು ತ್ರಿವಿಧ ಪ್ರಸಾದವನ್ನು ಶುದ್ಧ ಪ್ರಸಾದ, ಸಿದ್ಧಪ್ರಸಾದ ಮತ್ತು ಪ್ರಸಿದ್ಧ ಪ್ರಸಾದ ಎಂಬ ಅರ್ಥವನ್ನು ಕೊಟ್ಟಿದ್ದರೂ ಈ ಮೂರು ಪದಗಳಲ್ಲಿ ಪ್ರತಿಯೊಂದಕ್ಕೆ ಎರಡು ಬೇರೆ ಬೇರೆ ಅರ್ಥಕೊಟ್ಟಿದ್ದಾರೆ. ಗುರುವಿನಿಂದ ಪಡೆದ ಪ್ರಸಾದ ಶುದ್ಧ ಪ್ರಸಾದ, ಇದು ಗುರುವಿನಿಂದ ಪಡೆದಾದುದು ದರಿಂದ ಅದಕ್ಕೆ ಗುರುಪ್ರಸಾದ ಎಂಬ ಹೆಸರು ಇದೆ. ಲಿಂಗಕ್ಕೆ ಅರ್ಪಿಸಿ ಪಡೆದ ಪ್ರಸಾದವೇ ಸಿದ್ಧ ಪ್ರಸಾದ. ಇದು ಲಿಂಗದಿಂದ ಪಡೆದುದಾದುದರಿಂದ ಅದಕ್ಕೆ ಲಿಂಗ ಪ್ರಸಾದವೆಂಬ ಹೆಸರೂ ಇದೆ. ಜಂಗಮಕ್ಕರ್ಪಿಸಿ ಪಡೆದ ಪ್ರಸಾದಕ್ಕೆ ಪ್ರಸಿದ್ಧ ಪ್ರಸಾದ ಅಥವಾ ಜಂಗಮ ಪ್ರಸಾದ ಎಂಬ ಹೆಸರಿದೆ.

* ನಂ.೧೬೧೭, ಮಾತೃಶ್ರೀ,ಸರ್.ಎಂ. ವಿಶ್ವೇಶ್ವರಯ್ಯ ಮುಂದುವರೆದ ಬಡಾವಣೆ ೮ನೇ ಬ್ಲಾಕ್, ಮುದ್ದಿನ ಪಾಳ್ಯ ಮುಖ್ಯರಸ್ತೆ, ಬೆಂಗಳೂರು.

ತನುವಿನ ಸ್ವಾರ್ಥಕ್ಕೆ ತೆಗೆದುಕೊಳ್ಳದೆ ಅದು ಶುದ್ಧಿಯಾಗಲಿ ಎಂಬ ಉದ್ದೇಶದಿಂದ ತೆಗೆದುಕೊಂಡ ಗುರುಪ್ರಸಾದವು ಶುದ್ಧ ಪ್ರಸಾದವೆನಿಸಿಕೊಳ್ಳುತ್ತದೆ. ರುಚಿ ಎಂಬ ಬಯಕೆಯನ್ನು ಪೂರೈಸಲು ಪ್ರಸಾದವನ್ನು ತೆಗೆದುಕೊಳ್ಳದೆ ರುಚಿ ಶುಚಿ ಹೇಗೆ ಇದ್ದರೂ ಕೇವಲ ನಿಷ್ಠೆಯಿಂದ ತೆಗೆದುಕೊಂಡ ಪ್ರಸಾದ ಸಿದ್ಧಪ್ರಸಾದ. ವಸ್ತುಗಳನ್ನು ಎಲ್ಲಿದ್ದರಲ್ಲಿಂದಲೇ ಯಾವ ಸ್ವಾರ್ಥ ಉದ್ದೇಶವಿಲ್ಲದೆಯೇ ಅರ್ಪಿಸಿ ಪಡೆದ ಪ್ರಸಾದವೇ ಪ್ರಸಿದ್ಧ ಪ್ರಸಾದ.

ಚೆನ್ನಬಸವಣ್ಣನವರ ಮತ್ತೊಂದು ಅರ್ಥದ ಪ್ರಕಾರ ಕಣ್ಣಿನಿಂದ ನೋಡುವ ವಿಷಯಗಳ ರೂಪದ ಗುಣಾವ ಗುಣಗಳನ್ನು ನಿಸ್ವಾರ್ಥ ಭಾವನೆಯಿಂದ ಇಷ್ಟಲಿಂಗಕ್ಕೆ ಅರ್ಪಿಸಿ ಪಡೆದುದು ಶುದ್ಧ ಪ್ರಸಾದ. ರುಚಿಯ ಗುಣಾವಗುಣಗಳನ್ನು ನಿಸ್ವಾರ್ಥ ಭಾವನೆ ಯಿಂದ ಪ್ರಾಣಲಿಂಗಕ್ಕೆ ಅರ್ಪಿಸಿ ಪಡೆದುದು ಸಿದ್ಧಪ್ರಸಾದ. ಆಹಾರವೇನೇ ಇರಲಿ, ಅದರ ರುಚಿ ಏನೇ ಇರಲಿ, ನಿರ್ಭಾವದಿಂದ ಭಾವ ಲಿಂಗಕ್ಕರ್ಪಿಸಿ ಪಡೆದುದು ಪ್ರಸಿದ್ಧ ಪ್ರಸಾದ.

ಶಿವನಿಗರ್ಪಿಸದಲ್ಲದೆ ಏನನ್ನು ಕೊಳ್ಳನೆನ್ನುವವನು ಪ್ರಸಾದಿ. ಇದು ಆಹಾರ ಪಾನೀಯಗಳ ಅರ್ಪಣೆಯಿಂದ ಪ್ರಾರಂಭ ವಾಗಿ ದೇಹೇಂದ್ರಿಯಾದಿಗಳ ಅರ್ಪಣೆಯಲ್ಲಿ ಮುಗಿಯುತ್ತದೆ.

ಪ್ರಸಾದಿ ಲೆಂಕ ಬಂಕಣ್ಣ ತನ್ನ ವಚನವೊಂದರಲ್ಲಿ ಪ್ರಸಾದಿಯ ಮಹತ್ವ ಗುಣಗಳನ್ನು ಅಭಿವ್ಯಕ್ತಿಪಡಿಸಿದ್ದಾನೆ.

*ಆಚಾರಲಿಂಗ, ಗುರುಲಿಂಗ, ಶಿವಲಿಂಗ ಜಂಗಮಲಿಂಗ*
*ಪ್ರಸಾದಲಿಂಗ, ಮಹಾಲಿಂಗ ಮುಂತಾಗಿರ್ದ*
*ದೃ..ಷ್ಟ ಅರ್ಪಿತಂಗಳ ಅರ್ಪಿಸುವಲ್ಲಿ ಗಂಧದಿಂದ ಸುಳಿವ*
*ನಾನಾ ಸುಗಂಧವ*
*ರಸದಿಂದ ಬಂದ ನಾನಾ ರಸಂಗಳ*
*ರೂಪಿನಲ್ಲಿ ಕಾಣಿಸಿಕೊಂಬ ನಾನಾ ಚಿತ್ರ ವಿಚಿತ್ರ*
*ಖಂಡಿತ ಅಖಂಡಿತಮಪ್ಪ ದೃಷ್ಟಾಂತಂಗಳಲ್ಲಿ*
*ಸ್ಪರ್ಶನದಲ್ಲಿ ಮೃದುಕಠಿಣದೊಳಗಾದ*
*ಮುಟ್ಟುತಟ್ಟಿನ ಭೇದವ ಲಕ್ಷಿಸುವಲ್ಲಿ*
*ಶಬ್ದದಿಂದ ಸಪ್ತಸ್ವರದೊಳಗಾದ ನಾನಾ ಘೋಷ ವಾಸನಂಗಳ*
*ಅಳಿದುಳಿದು ತೋರುವ ಸುನಾದ ಸಂಚುಗಳಲ್ಲಿ ;*
*–ಇಂತೀ ಪಂಚೇಂದ್ರಿಯಂಗಳಲ್ಲಿ*
*ಪ್ರಸಾದ ಮುಂತಾಗಿ ಅರ್ಪಿಸಿಕೊಂಡಿಹವೆಂಬಲ್ಲಿ*
*ಗುರುಪ್ರಸಾದಿಗೆ ಲಿಂಗ ಪ್ರಸಾದವಿಲ್ಲ.*
*ಲಿಂಗ ಪ್ರಸಾದಿಗೆ ಜಂಗಮ ಪ್ರಸಾದವಿಲ್ಲ.*
*ಜಂಗಮಪ್ರಸಾದಿಗೆ ಮಹಾಪ್ರಸಾದವಿಲ್ಲ.*
*ಮಹಾಪ್ರಸಾದಿಗೆ ಪರಿಪೂರ್ಣ ಪ್ರಸಾದವಿಲ್ಲ.*
*ಪರಿಪೂರ್ಣಪ್ರಸಾದಿಗೆ ಪಂಚೇಂದ್ರಿಯದೊಳಗಾದ*
*ಮುಟ್ಟಿನ ಪ್ರಸಾದ, ಕಟ್ಟಿನ ಪ್ರಸಾದವಿಲ್ಲ.*
*ಅವೆಂತೆಂದಡೆ; ಕರ್ಪೂರದ ಚಿತ್ರಸಾಲೆಯ ಕಿಚ್ಚು ಮುಟ್ಟಿದ*
*ಮತ್ತೆ ಚಿತ್ರವಲ್ಲಿಯೆ ನಿರ್ಲಕ್ಷವಾದಂತೆ ;*
*ಪತ್ರಂಗಳಲ್ಲಿ ನಾನಾ ಅಕ್ಷರಂಗಳ ಲಕ್ಷಿಸಿ ಬರೆದು*
*ಅವು ಕಿಚ್ಚು ಮುಟ್ಟಿ ಸುಟ್ಟಲ್ಲಿ*
*ಎತ್ತ ಪ್ರತಿಯ ಲಕ್ಷಿಸಬಹುದೆ ? ಇಂತೀ ಅರಿದರುಹಿನಲ್ಲಿ*
*ಎಡೆದೆರಪಿಲ್ಲದ ಪ್ರಸಾದಿಗೆ ಆ ಗುಣ ಪ್ರಸನ್ನಪ್ರಸಾದಿಯ*
*ಇರವು ದಹನ ಚಂಡಿಕೇಶ್ವರಲಿಂಗದಿರವು.*

*[ಸಂಕೀರ್ಣ ವಚನ ಸಂಪುಟ–೩ ವ.೧೧೫]*

ಆಚಾರಲಿಂಗ ಸ್ಥಲ, ಅಳವಡಬೇಕಾದರೆ ವಂಚನೆ ಮಾಡದ, ಬೇರೊಬ್ಬರಿಂದ ಸಾಲವನ್ನು ಬೇಡದ, ಪರ ಧನಕ್ಕೆ ಆಸೆ ಪಡೆದ, ಇಷ್ಟಲಿಂಗದ ಹೊರತಾಗಿ ಅನ್ಯ ದೇವರುಗಳಿಗೆ ನಡೆದುಕೊಳ್ಳದೆ. ಗುರು, ಲಿಂಗ, ಜಂಗಮ ನಿಂದೆಗಳನ್ನು ಕೇಳದ ಶೀಲವನ್ನು ಆಚರಿಸಬೇಕು. ಜೊತೆಗೆ ಶರಣರು, ಸಂತರು, ಬರುವಿಕೆಯನ್ನು ಸಂತೋಷದಿಂದ ಬರಮಾಡಿಕೊಳ್ಳಬೇಕು. ಪ್ರಸಾದ ಕಾಯಕನಾಗಬೇಕು ಅಂದರೆ ಶಿವನಿಗರ್ಪಿಸಿದ ಆಹಾರವು, ಪ್ರಸಾದ ಅಥವಾ ಶುದ್ಧ ಪ್ರಸಾದವಾಗುತ್ತದೆ. ಅದನ್ನು ಸೇವಿಸಿದ ಭಕ್ತನು ಶುದ್ಧನಾಗುತ್ತಾನೆ. ಶಿವನಿಂದ ಬಂದುದೆಲ್ಲವನ್ನು ಶಿವನಿಗರ್ಪಿಸಿ ಪ್ರಸಾದವನ್ನಾಗಿ ಮಾಡಿಕೊಂಡು, ಅನಂತರವೇ ಸ್ವೀಕರಿಸಬೇಕಾದುದು ಭಕ್ತನ ನಿತ್ಯ ಮತ್ತು ಆದ್ಯ ಕರ್ತವ್ಯ. ಪ್ರಥಮದಲ್ಲಿ ಆಹಾರ ಪಾನೀಯಗಳಷ್ಟೇ ಅರ್ಪಿಸುವ ಭಕ್ತನು ತನ್ನ ಜ್ಞಾನ ವೃದ್ಧಿಯಾದಂತೆಲ್ಲಾ ತನ್ನ ದೇಹೇಂದ್ರಯಾದಿಗಳನ್ನು ಮೊದಲು ಶಿವನಿಗರ್ಪಿಸಿ ಆನಂತರ ಅವುಗಳನ್ನು ಉಪಯೋಗಿಸುತ್ತಾನೆ ಅಥವಾ ಅವುಗಳ ಮೂಲಕ ಅನುಭವಿಸುತ್ತಾನೆ. ಒಂದರ್ಥದಲ್ಲಿ ಇಡೀ ಕಾಯವೇ ಪರಶಿವನದು ಎಂದು ತಿಳಿಯ ಬೇಕಾದುದು ಭಕ್ತನ ಆಧ್ಯಾತ್ಮಿಕ ಕರ್ತವ್ಯವಾಗುತ್ತದೆ.





ಅಂಥವನ ಕಾಯವೇ ಪ್ರಸಾದ ಕಾಯ. ಪ್ರಸಾದ ಹೇಗೆ ಶುದ್ಧವೋ ಹಾಗೆಯೇ ಪ್ರಸಾದ ಕಾಯವೂ ಶುದ್ಧ. **'ಕೂಡಲ ಸಂಗಮದೇವನೊಲಿಸಬಂದ ಪ್ರಸಾದ ಕಾಯವ ಕೆಡಿಸಲಾಗದು'** ಅಂತಹ ಕಾಯವು ಯಾವಾಗಲೂ ಶುದ್ಧ ವಾಗಿರಬೇಕೆ ಹೊರತು ಅನೈತಿಕ ಅಧಾರ್ಮಿಕ ಭಾವನೆಗಳ ಆಗರವಾಗಿರಬಾರದು. ದೇಹಗುಣ ಧರ್ಮಗಳನ್ನು ಬಿಡಬೇಕು. ಅಕ್ರೋಧ, ಸತ್ಯವಚನ, ಸಾವಧಾನ, ವ್ರತಾನುಗ್ರಹ, ದಮಕ್ಷಮ, ದಾನ ಮುಂತಾದ ಗುಣಶೀಲನಾಗಬೇಕು. ತಮ್ಮೊಳಗೆ ಮನೆಮಾಡಿ ಕೊಂಡಿರುವ ಅವಗುಣ ಅರಿಷಡ್ವರ್ಗಗಳೆಂಬ ಭವಿಗಳನ್ನು ಭಕ್ತರನ್ನಾಗಿಸಿಬೇಕು. ಶಿವ ಸಂಸ್ಕಾರದಿಂದ ಕರಣೇಂದ್ರಿಯ ಗಳನ್ನು ಲಿಂಗ ಕಿರಣಗಳನ್ನಾಗಿಸಬೇಕು. ಸಪ್ತ ಧಾತುಗಳನ್ನು ಮಂತ್ರಮಯವಾಗಿಸಿ ಮೀಸಲಾಗಿಸಿ ಮಹಾ ಪ್ರಸಾದವನ್ನಾಗಿಸಬೇಕು. ಗುರುವಿನಲ್ಲಿ ಭಕ್ತಿ ಲಿಂಗದಲ್ಲಿ ನಿಷ್ಠೆ, ಜಂಗಮದಲ್ಲಿ ಸಮಾಧಾನ, ಅರ್ಪಿತ ದಲ್ಲಿ ಅವಧಾನ ಪ್ರಸಾದದಲ್ಲಿ ಪರಿಣಾಮ ಇವನ್ನು ಅರಿತು ಆಚರಿಸಿದಲ್ಲಿ ಆಚಾರಲಿಂಗ ಅಳವಟ್ಟಂತೆ. ನಡೆ ನುಡಿ ಒಂದಾಗುವುದೆ ಆಚಾರಲಿಂಗ **"ತನ್ನ ಲಿಂಗಕ್ಕೆಂದು ಬಂದ ಪದಾರ್ಥದ ರೂಪಕಂಡು ಸಂತೋಷಿಸುತ್ತಾನೆ. ಪ್ರಸಾದಿ ಬಂದುದು ಪದಾರ್ಥ ಸಂದುದು ಪ್ರಸಾದ. ನಿಂದುದು ಕಿಲ್ಬಿಷ"** ಹೀಗೆ ಆಚರಿಸಿ ಅರಿದಾತನೆ ಆಚಾರಲಿಂಗ ಪ್ರಸಾದಿ.

ಸಾಕಾರ ಶ್ರೀ ಗುರುವೇ ನಿರಾಕಾರ ಗುರುಲಿಂಗವಾಗಿ ಶಿಷ್ಯನಲ್ಲಿ ಅಳವಡುತ್ತಾನೆ. ಆದ್ದರಿಂದ ಗುರು ಶಿಷ್ಯ ಸಂಬಂಧ ಇಲ್ಲಿಂದಲೇ ಆರಂಭವಾಗುತ್ತದೆ. ಮೊದಲು ಮನೆಯ ಹೊಗುವ ಗುರುಬೇಕು. ಬಳಿಕ ಮನವ ಹೊಗುವ ಗುರುವಾಗಬೇಕು. ತನ್ನ ಮನೆಯ ಹೊಗದ ಗುರುವನರಿಸಿಕೊಂಡು ಹೋದಾತ ಶಿಷ್ಯನಲ್ಲ, ತಾ ಹೊಗದ ಮನೆಯವರಿಗೆ ಕಾರುಣ್ಯವ ಮಾಡುವಾತ ಗುರುವಲ್ಲ, ಹೀಗಿದ್ದರೆ, ಇಬ್ಬರಲ್ಲಿ ಭಕ್ತತ್ವ ಅಂದರೆ ಒಗ್ಗೂಡುವಿಕೆ ಉಂಟಾಗುವುದಿಲ್ಲ. ಶಿಷ್ಯನ ಕುಲಹೀನತೆಯ ಕಳೆದು ಪ್ರಾಣಲಿಂಗವ ಅನುಗ್ರಹಿಸು ವಾತನೆ ಶ್ರೀ ಗುರು. ಕಾಯ ಕರಣಗಳ ಕತ್ತಲೆಯ ಕಳೆದುದೇ ಗುರುಲಿಂಗ. ಗುರುವಿಲ್ಲದೆ, ಲಿಂಗವಿಲ್ಲ, ಲಿಂಗ ವಿಲ್ಲದೆ ಅಂಗಶುದ್ಧಿಯಿಲ್ಲ. ಜ್ಯೋತಿಯಿಲ್ಲ, ಈ ಹಿನ್ನಲೆಯಲ್ಲಿ ಪ್ರಸಾದ ಲೆಂಕ ಬಂಕಣ್ಣ ತನ್ನ ವಚನದಲ್ಲಿ ಗುರುಲಿಂಗ ಎಂಬ ಶಬ್ದವನ್ನು ಬಳಸಿದ್ದಾನೆ.

ಇನ್ನು ಶಿವಲಿಂಗವೆಂದರೆ ಅರುಹು ಕುರುಹುಗಳ ಬೆಸುಗೆ ಶಿವಲಿಂಗ ಕಣ್ಣಿಗೆ, ರೂಹಿಗೆ, ರೂಹಾಗಿ ಶಿವಲಿಂಗ ವೆನಿಸಿದೆ ಕುರುಹು, ಕಣ್ಣು ರೂಹು ಈ ಮೂರು ಶಿವಲಿಂಗದಲ್ಲಿ ಐಕ್ಯಗೊಂಡಿರುತ್ತದೆ. ಪ್ರಾಣದ ಸಂಚು ವುಳ್ಳುದಾಗಿ ಪ್ರತಿಯಲ್ಲ. ಇಷ್ಟಲಿಂಗ ದೃಷ್ಟಿಸುವ ಕಣ್ಣು ಮೊದಲಿರಬೇಕು. ನೇತ್ರವೇ ಅಂಗ, ಸೂತ್ರವೇ ಲಿಂಗ ಎಂದಿರುವ ಕಣ್ಣು ಇಲ್ಲದಿದ್ದರೆ ಇಷ್ಟಲಿಂಗದ ಕುರುಹು ಅರುಹಿನಲ್ಲಿ ಕರಿಗೊಳ್ಳದು, ಆತ್ಮವೆಂಬ ಅಂಗದಲ್ಲಿ ಅರಿವೆಂಬ ಲಿಂಗವನ್ನಿಟ್ಟಿದ್ದಾನೆ ಗುರು. ಈ ಬೆಸುಗೆಯನ್ನು ಬಿಚ್ಚುವವರಾರು, **'ಕಾಣ ಬಾರದ ಲಿಂಗವ ಕಾಂಬುದು ತನ್ನ ಶಕ್ತಿಕಾಣ ಕೂಡಲ ಚನ್ನಸಂಗಮದೇವಾ'** ಎಂದಿದ್ದಾರೆ ಚೆನ್ನ ಬಸವಣ್ಣ.

ವೀರಶೈವಧರ್ಮದಲ್ಲಿ ಜಂಗಮರ ಪಾತ್ರ ವಿಶಿಷ್ಟ ವಾದುದು. ಚೈತನ್ಯವೇ ಜಂಗಮ, ಪ್ರಸಾದಿಗೆ ಸರ್ವ ಜೀವರು. ಜಂಗಮರು. ಮರ್ಮವರಿತು ಮಾಡುವವನೆ ಪ್ರಸಾದಿ, ಎಲ್ಲ ಜೀವಿಗಳಲ್ಲಿ ಶಿವನಿದ್ದಾನೆ. ಅಂತರ್ಯಾಮಿ ಯಾದ ಚೈತನ್ಯ ಜಂಗಮಕ್ಕೆ ಶಿವನೆಂದು ಮಾಡುವುದೇ ಜಂಗಮಲಿಂಗಾರಾಧನೆ.

ಜಂಗಮಲಿಂಗ ತುಂಬಾ ವ್ಯಾಪಕವಾದುದು. ಆತ್ಮರೂಪ ವಾದುದು. ಅಕಾಯವಾದುದು. ಅದು ಸದಾ ಸಮ ಅದರಿಂದ ಅದು ಅನುಪಮ. ಜಂಗಮಲಿಂಗ ತೆರೆಯಿಲ್ಲದ ವಸ್ತು. ಅದಕ್ಕೆ ವಿರತಿ–ವಿಷಯ ರತಿ ಎರಡೂ ಇಲ್ಲ. ಒಂದು ಗುಣಕ್ಕೆ ಗಂಟು ಬಿದ್ದ ಜಂಗಮವಾದರೆ, ಅದು ಒಮ್ಮಿಲ್ಲ ಒಮ್ಮೆ ಆಗಬಲ್ಲದು. ಆಗುತ್ತದೆ.

ವಾಯ್ವಂಗವಾದ ಚೈತನ್ಯ ಜಂಗಮಲಿಂಗವಾದರೆ ಆಕಾಶಾಂಗದ ಚೈತನ್ಯ ಪ್ರಸಾದಲಿಂಗ, ಸುಸ್ಪರ್ಶನ ಅಧಿಕಾರ ಜಂಗಮಲಿಂಗದ್ದಾದರೆ ಸುಶಬ್ದ ಪ್ರಸಾದ ಅಧಿಕಾರ ಪ್ರಸಾದ ಲಿಂಗದ್ದು, ಜಂಗಮಲಿಂಗವನ್ನು ಗರ್ಭೀಕರಿಸಿಕೊಂಡಿರುವುದು ಪ್ರಸಾದಲಿಂಗ. ನಾದ ಬಿಂದುವಿನೊಳಗೆ ಉದಯವಾದ ಚಿತ್ಕಳೆ. "ಪ್ರಕಟದಿಂದ ಕೊಂಬುದು ಪ್ರಸಾದವಲ್ಲ; ಗುಪ್ತದಿಂದ ಕೊಂಬುದು

ಪ್ರಸಾದವಲ್ಲ, ಪ್ರಕಟದಂತುಟೆ ಪ್ರಸಾದ ? ಗುಪ್ತದಂತುಟೆ ಪ್ರಸಾದ? ಪ್ರಸಾದದಂತುವನೇನೆಂದು ಹೇಳುವೆ?" ಅಂತಹ ಆ ಪರ ಪ್ರಸಾದದ ಚೈತನ್ಯವೇ ಪ್ರಸಾದ ಲಿಂಗ. ಶುದ್ಧ, ಸಿದ್ಧ, ಪ್ರಸಿದ್ಧ ಈ ಮೂರು ಪ್ರಸಾದವೂ ಅಹುದು. ಇವು ಮೂರು ಸೇರಿ ಆದುದೆ ಪ್ರಸಾದಲಿಂಗ. ಮಲತ್ರಯ ರಹಿತವಾದುದು ಶುದ್ಧ, ಕರಣತ್ರಯ ರಹಿತವಾದುದು ಸಿದ್ಧ, ಆತ್ಮತ್ರಯ ವೊಂದಾದುದೆ ಪ್ರಸಿದ್ಧ. ಈ ಮೂರರ ಸಮ್ಮೇಳನವೇ ಪ್ರಸಾದ ಲಿಂಗ.

ಪ್ರಸಾದಿಯ ಆತ್ಮಾಂಗದ ಮಹಾಚೈತನ್ಯ ಮಹಾಲಿಂಗ ಮುಖ್ಯವಾಗಿ ಪ್ರಸಾದಿಯ ನೇತ್ರಾಂಗದೊಳಗಿನ ರೂಪ ಗ್ರಾಹಕ ಚೈತನ್ಯವಾದ ಶಿವಲಿಂಗದ ಚಿತ್ರಭಿ. ಸೌಂದರ್ಯ ತೃಪ್ತಿಯನ್ನು ಅರ್ಪಿಸುವ ಚಕ್ಷುವಿನ ಚಿತ್ಕಳೆ, ರೂಪತೃಪ್ತಿಯ ಪೂರ್ವಾಶ್ರಯವನ್ನು ಪರಿಹರಿಸುವ ಪರಮಕಳೆ ಪ್ರಸಾದಿಯ ಪರವಶತೆಯ ನೆಲೆ.

ಚೆನ್ನಬಸವಣ್ಣ ಪ್ರಸಾದಿಯ ಮಹಾಲಿಂಗಸ್ಥಲದಲ್ಲಿ ಪ್ರಸಾದಿಯ ಐಕ್ಯಸ್ಥಿತಿಯನ್ನು ಕುರಿತು ತನ್ನ ವಚನದಲ್ಲಿ ಹೀಗೆ ಅಭಿವ್ಯಕ್ತಿಪಡಿಸಿದ್ದಾನೆ.

*"ಲಿಂಗದ ಪೂರ್ವಾಶ್ರಯವ ಕಳೆಯಬಲ್ಲಾತನೆ ಭಕ್ತ:*
*ಗುರುವಿನ ಪೂರ್ವಾಶ್ರಯವ ಕಳೆಯಬಲ್ಲಾತನೆ ಶಿಷ್ಯ*
*ಪ್ರಸಾದದ ಪೂರ್ವಾಶ್ರಯವ ಕಳೆಯಬಲ್ಲಾತನೆ ಪ್ರಸಾದಿ*
*ಇಂತೀ ತ್ರಿವಿಧವ ಪೂರ್ವಾಶ್ರಯವ ಕಳೆಯಬಲ್ಲಾತನೆ*
*ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯನು"*

ಐಕ್ಯತೆಯ ನೆಲೆ ಮಹಾಲಿಂಗ, ಪ್ರಸಾದಿ ಸ್ಥಲದ ಪ್ರಸಾದಿಯ ಐಕ್ಯತೆಗೆ ಶಿವಲಿಂಗದೊಳಗಿನ ಮಹಾಲಿಂಗವೆ ನೆಲೆ 'ಸ್ವರೂಪು ಪ್ರಸಾದಿ ನಿರೂಪು ಲಿಂಗೈಕ್ಯ'. ಪ್ರಸಾದಿಯ ಲಿಂಗೈಕ್ಯ ಈ ಬಗೆಯದು. ಶಿವಸೌಂದರ್ಯೋಪಾಸಕನಾಗಿ ಪ್ರಸಾದಿಯಾಗುತ್ತಾನೆ. ಅದರಲ್ಲಿ ಪರಿಣಿತನಾಗಿ ಸೌಂದರ್ಯ ನಿಷ್ಪತ್ತಿಗೊಂಡು ನಿರೂಪನಾದರೆ ಅದೇ ಲಿಂಗೈಕ್ಯ. ಅದೇ ಪ್ರಸಾದಿಯ ಮಹಾಲಿಂಗಸ್ಥಲ. ಪ್ರಸಾದವೆ ಪರಮಾತ್ಮ, ಅದಕ್ಕೆ ತೆರಹಿಲ್ಲ ಅದು ಆತನ ಮನಭಾವ ಕರಣಗಳಲ್ಲಿ ಭಾವದಲ್ಲಿ ಭರಿತ ದೇವ. ಎಲ್ಲ ಭೋಗಗಳನ್ನು ತನ್ನದಾಗಿಸಿಕೊಂಡು ತನ್ಮಯನಾದ ಶಿವ ಅದುವೆ ಪ್ರಸಾದಿಯ ಮಹಾಲಿಂಗದೇವ.

ಅನೇಕ ಶರಣರ ಪ್ರಕಾರ ಮಹಾಲಿಂಗವೆಂದರೆ ನಿಷ್ಕಲ ಲಿಂಗ. ಮಹಾಲಿಂಗದಿಂದ ಐದು ಶಕ್ತಿ, ಐದು ಭಕ್ತಿ, ಐದು ಅಧಿದೇವತೆಗಳು ಇತ್ಯಾದಿ ಉತ್ಪತ್ತಿಯಾಗುತ್ತವೆ. ಆದರೆ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಪ್ರಕಾರ ಸ್ವಪ್ರಜ್ಞೆ ಯಿಲ್ಲದ ಪರಶಿವನೇ ಶೂನ್ಯಲಿಂಗ. ಸ್ವಪ್ರಜ್ಞೆ ಉಂಟಾಗಿ ಅವನಲ್ಲಿ ಸೃಷ್ಟಿಮಾಡಬೇಕೆಂಬ ಇಚ್ಛೆ ಉಂಟಾದರೆ ಅವನು ನಿಃಕಲ ಲಿಂಗ ಎನಿಸಿಕೊಳ್ಳುತ್ತಾನೆ. ನಿಃಕಲ ಲಿಂಗದಲ್ಲಿ ಆ ಇಚ್ಛೆ ಉಂಟಾದ ಕೂಡಲೆ ಅದರಿಂದ ಚಿತ್ತು ಉತ್ಪತ್ತಿಯಾಗಿ ಇದರಿಂದ ಅ.ಉ ಮ ಕಾರಗಳು ಉತ್ಪತ್ತಿಯಾಗಿ ಚಿತ್ತು ಆ ಮೂರಕ್ಷರಗಳನ್ನು ಕೂಡಿಕೊಂಡು ಪ್ರಣವುವೆನಿಸಿಕೊಳ್ಳುತ್ತದೆ. ಆ ಓಂಕಾರವೆಂಬ ಪ್ರಣಮವೇ ಅಖಂಡ ಪರಿಪೂರ್ಣ ಗೋಳಕಾರದ ತೇಜೋಮಯ ಮೂರ್ತಿಯಪ್ಪ ಮಹಾ ಲಿಂಗ. ಹೀಗೆ ತೋಂಟದ ಸಿದ್ಧಲಿಂಗಶಿವಯೋಗಿಗಳ ಪ್ರಕಾರ ಮಹಾಲಿಂಗವೂ ಒಂದು ಉತ್ಪತ್ತಿಯೇ ಹೊರತು ಅದೇ ಸೃಷ್ಟಿಕರ್ತನಲ್ಲ. ಆದರೆ ಸೃಷ್ಟಿಗೆ ಬೇಕಾದ ಉಪಾದಾನ ಕಾರಣಗಳೆಲ್ಲವೂ ಮಹಾಲಿಂಗದಲ್ಲಿ ಅಡಕ ವಾಗಿವೆ. ಪಂಚಶಕ್ತಿಯನ್ನು ಪಂಚಸಾದಾಖ್ಯವನ್ನು ಪಂಚಕಲೆಗಳನ್ನು ಪಂಚಾಕ್ಷರಗಳನ್ನು, ಪಂಚಸಾದಾಖ್ಯ ವನ್ನು ತನ್ನಲ್ಲಿ ಗರ್ಭೀಕರಿಸಿ ಕೊಂಡು ತಾನು ಚಿದ್ ಬ್ರಹ್ಮಾಂಡಾತ್ಮಕನಾಗಿ ಸರ್ವವ್ಯಾಪಕ ನಾಗಿದ್ದಾನೆ. ಹೀಗೆ ಅನಂತ ಕೋಟಿ ಬ್ರಹ್ಮಾಂಡಗಳನ್ನು ಮಹಾಲಿಂಗ ಗರ್ಭೀಕರಿಸಿಕೊಂಡಿದ್ದರೂ ಆತನಿಗೆ ಕರಚರಣಾ ದ್ಯವಯಂಗಳಿಲ್ಲ. ಅಂತೂ ಸೃಷ್ಟಿಪೂರ್ವ ಸ್ಥಿತಿಯ ಶಿವನ ಒಂದು ಅವಸ್ಥೆಯೇ ಮಹಾಲಿಂಗ.

ಆ ಮಹಾಲಿಂಗ ತಾನೊಬ್ಬನೇ ಅಂದರೆ ಕೇವಲ ಇಚ್ಛಾ ಮಾತ್ರದಿಂದ ಸೃಷ್ಟಿಸಲಾದ ಅವನಿಗೆ ಹಾಗೆ ಮಾಡಲು ಶಕ್ತಿ ಬೇಕು. ಶಕ್ತಿಯೂ ಸಹ ಆ ಸ್ಥಿತಿಯಲ್ಲಿ ನಾಮರೂಪಗಳಿಲ್ಲದ ಅವ್ಯಕ್ತಸ್ಥಿತಿಯಲ್ಲಿದ್ದು ಮಹಾಲಿಂಗನ ಒಂದು ಅವಿಭಾಜ್ಯ ಅಂಗವಾಗಿದೆ. ಪರಶಿವನ ಆ ಅವಸ್ಥೆಗೆ ಮಹಾಲಿಂಗ ಎಂದು ಹೆಸರು.

ಶರಣ ಪ್ರಸಾದಿ ಲೆಂಕ ಬಂಕಣ್ಣನ ಈ ಮೇಲಿನ ವಚನ ದಲ್ಲಿ ಗಂಧದ ಉದಾಹರಣೆಯನ್ನು ಬಳಸಿ ಕೊಂಡಿದ್ದಾನೆ. ಗಂಧದ ಆಹ್ಲಾದಕರ ಸುವಾಸನೆ





ದೊರೆತು ಮನವನ್ನು ಮುದಗೊಳಿಸುತ್ತದೆ. 'ರಸ' ಶಬ್ದವನ್ನು ವಿಶಾಲಾರ್ಥದಲ್ಲಿ ಶರಣ ಬಂಕಣ್ಣ ನಿರೂಪಿಸಿದ್ದಾನೆ. ರಸವೆಂದರೆ ಬರಿಯ ತೇವವಲ್ಲ ಸರಿಯಾದ ತೇವ, ಜೀವನ ಸತ್ಯ, ಭಾವ ಪ್ರಚೋದಕವಾದ ಒಂದು ಗುಣ. ಸಾರದ್ರವ, ಅಡುಗೆಯ ಸಾಹಿತ್ಯದಲ್ಲಿ ಷಡ್ರಸಗಳಿವೆ ಸಿಹಿ, ಕಹಿ, ಖಾರ, ಒಗರು, ಉಪ್ಪು, ಹುಳಿ ಇವು ಪದಾರ್ಥಜನ್ಯ ರಸಗಳು. ನುಡಿಯ ಸಾಹಿತ್ಯದಲ್ಲಿ ನವರಸಗಳಿವೆ ಶೃಂಗಾರ, ಹಾಸ್ಯ, ವೀರ, ಕರುಣ, ಭಯಾನಕ, ಭೀಭತ್ಸ, ವ್ಯಂಗ್ಯ, ದುಃಖ ಶಾಂತ ಇವು ಶಬ್ದಾರ್ಥಜನ್ಯ ರಸಗಳು.

ರಸಕ್ಕೆ ಹೃದಯು ಆಶ್ರಯು ಸ್ಥಾನವಾಗಿದೆ. ಹೃದಯದಿಂದ ಹೊರಟ ರಸ ಇಪ್ಪತ್ತುನಾಲ್ಕು ಧಮನಿಗಳಲ್ಲಿ ನುಗ್ಗುತ್ತದೆ. ನುಗ್ಗಿ ಅವುಗಳ ಮುಖಾಂತರ ಸರ್ವಾಂಗಗಳಲ್ಲಿ ಸಂಚರಿಸುತ್ತದೆ. ಸಂತೃಪ್ತಿಪಡಿಸುತ್ತದೆ ಬಾಳಿಸುತ್ತಿದೆ, ಬೆಳಸುತ್ತದೆ, ಬದುಕಿಸತ್ತದೆ. ಬೆಳಗಿಸುತ್ತದೆ, ರಸ ಸತ್ವಶಾಲಿಗಳನ್ನಾಗಿಸುತ್ತದೆ. ಸರ್ವರನ್ನು ಸಕ್ರಿಯವನ್ನಾಗಿಸುತ್ತದೆ. ಪ್ರಸಾದಿಯಾದವನಲ್ಲಿ ಗುರುಲಿಂಗ ಜಂಗಮ ಸೇವೆಯಲ್ಲಿ ಅರ್ಪಣಾ ಭಾವದಿಂದ ತನ್ನನ್ನು ತೊಡಗಿಸಿಕೊಳ್ಳಬೇಕು. ನಿಜವಾದ ಪ್ರಸಾದಿಯು ತಾನು ಸ್ಪರ್ಶಿಸುವ ಶೀತ, ಉಷ್ಣ, ಮೃದು, ಒರಟು ಇತ್ಯಾದಿಗಳೆಲ್ಲ ವನ್ನು ಪರಶಿವನ ಸ್ಪರ್ಶ ಎಂದು ತಿಳಿಯುತ್ತಾನೆ. ಹಾಗೆ ತಿಳಿದಾಗ ಅವನಲ್ಲಿ ಸ್ವಾರ್ಥ ಕಡಿಮೆಯಾಗಿ ಲಿಂಗ ಭಕ್ತಿ ಹೆಚ್ಚಾಗುತ್ತದೆ. ಅಲ್ಲದೆ ಸ್ಪರ್ಶದಲ್ಲಿ ಹಿತ ಅಹಿತಗಳ ವ್ಯತ್ಯಾಸ ಮಾಡುವುದನ್ನು ಬಿಟ್ಟು ಎಲ್ಲ ಸ್ಪರ್ಶವನ್ನು ಸಮಾನ ದೃಷ್ಟಿಯಿಂದ ಕಾಣುತ್ತಾನೆ. ಪಂಚೇಂದ್ರಿಯ ಗಳನ್ನು ಶುದ್ಧ ವಾಗಿಟ್ಟುಕೊಂಡು ಪರಶಿವನ ನಾಮ ಸ್ಮರಣೆಯನ್ನು ಭಕ್ತಿಯಿಂದ ಮಾಡುವುದರ ಮೂಲಕ ಪ್ರಸಾದವನ್ನು ಅರ್ಪಿಸಬೇಕು.

ಗುರುವು ಭಕ್ತನ ಮನೆಗೆ ಬಂದಾಗ ಭಕ್ತನು ಗುರುವಿಗೆ ಆಹಾರವನ್ನು ಅರ್ಪಿಸುತ್ತಾನೆ. ಗುರುವೂ ಆ ಆಹಾರದಲ್ಲಿ ಸ್ವಲ್ಪ ಪ್ರಮಾಣವನ್ನು ಸ್ವೀಕರಿಸಿ ಉಳಿದುದನ್ನು ಭಕ್ತನಿಗೆ ಹಿಂದಿರುಗಿಸುತ್ತಾನೆ. ಆ ಮಿಕ್ಕ ಆಹಾರವೇ ಗುರುಪ್ರಸಾದ. ಇದೊಂದು ಸಾಂಕೇತಿಕ ಕ್ರಿಯೆ. ಪರಶಿವನಿಗೆ ಅರ್ಪಿಸಿದ ಆಹಾರ ಹೇಗೆ ಪ್ರಸಾದವಾಗುತ್ತದೆ ಎಂದು ನಂಬುತ್ತೇವೆಯೋ ಹಾಗೆಯೇ ಇಲ್ಲಿ ಅರ್ಪಿಸಿದ ಆಹಾರವೂ ಪ್ರಸಾದ ವಾಗುತ್ತದೆ ಎಂದು ನಂಬುತ್ತೇವೆ. ಇನ್ನು ಗುರುವಿಗೆ ಪ್ರಸಾದವನ್ನು ಅರ್ಪಿಸುವವನಿಗೆ ಗುರುಪ್ರಸಾದಿ ಎಂದು ಕರೆಯುತ್ತಾರೆ. ಇಷ್ಟಲಿಂಗಕ್ಕೆ ಮಂತ್ರ ಸ್ಮರಣೆಯಿಂದ ಮೂರು ವೇಳೆ ರೂಪನರ್ಪಿಸಿದಲ್ಲಿ ಲಿಂಗಪ್ರಸಾದ ವೆನಿಸುವುದು.

ಜಂಗಮ ಪ್ರಸಾದವೆಂದರೆ ಭಕ್ತನು ಅರ್ಪಿತ ಆಹಾರ ದಲ್ಲಿ ಒಂದು ತುತ್ತನ್ನು ತಾನು ಸಾಂಕೇತಿಕವಾಗಿ ಸ್ವೀಕರಿಸಿದ ಜಂಗಮನು ಉಳಿದುದನ್ನು ಭಕ್ತನಿಗೆ ಕೊಡುತ್ತಾನೆ. ಭಕ್ತ ಅದನ್ನು ಎಂಜಲು ಎಂದು ತಿಳಿಯ ಬಾರದು. ಜಂಗಮನಿಗೆ ಪ್ರಸಾದವನ್ನು ಅರ್ಪಿಸುವವನಿಗೆ ಜಂಗಮ ಪ್ರಸಾದಿ ಎಂದು ಕರೆಯುತ್ತಾರೆ. ಗುರು-ಲಿಂಗ ಜಂಗಮರಿಗೆ ನಿಷ್ಠೆಯಿಂದ ಮನಶುದ್ಧಿಯಿಂದ ಅರ್ಪಿಸಿದ ಪ್ರಸಾದಕ್ಕೆ ಸ್ಪರ್ಶದ ಸೂತಕವಿಲ್ಲ. ಕರ್ಪೂರದ ಕಿಚ್ಚು ಕರ್ಪೂರದೊಳಗೆ ಲೀನವಾದಂತೆ ಎಲೆಯ ಮೇಲೆ ಬರೆದ ಅಕ್ಷರಗಳಿಗೆ ಬೆಂಕಿಯನ್ನು ಮುಟ್ಟಿಸಿದರೆ ಅಕ್ಷರಗಳು ಹೇಗೆ ಉಳಿಯುವುದಿಲ್ಲವೋ ಹಾಗೆಯೇ ಪ್ರಸಾದಿಯು ತನು, ಮನ, ಭಾವದಿಂದ ಅರ್ಪಿಸಿದ ಪ್ರಸಾದ ಪರಶಿವನಿಗೆ ಅರ್ಪಿತವಾಗುತ್ತದೆ ಎಂದಿದ್ದಾನೆ ಶರಣ ಪ್ರಸಾದಿ ಲೆಂಕ ಬಂಕಣ್ಣ.

ಪ್ರಸಾದಿ ಲೆಂಕ ಬಂಕಣ್ಣನ ಮತ್ತೊಂದು ವಚನದಲ್ಲಿ ಪಂಚೇಂದ್ರಿಯಗಳಿಗೆ ಅರ್ಪಿಸಿದ ಪ್ರಸಾದ ಪರಶಿವನಿಗೆ ಅರ್ಪಿತವಾಗುವುದಿಲ್ಲ ಎಂದಿದ್ದಾನೆ.

*ಕಣ್ಣು ನೋಡಿ ಅರ್ಪಿಸಿದ ಪ್ರಸಾದ ಆದಾವ ಲಿಂಗಕ್ಕೆ ?*
*ಕಿವಿ ಕೇಳಿ ಅರ್ಪಿಸಿದ ಪ್ರಸಾದ ಆದಾವ ಲಿಂಗಕ್ಕೆ ?*
*ಘ್ರಾಣ ವಾಸಿಸಿ ಅರ್ಪಿಸಿದುದು ಆದಾವ ಲಿಂಗಕ್ಕೆ ?*
*ಜಿಹ್ವೆಯ ಕೊನೆಯಲ್ಲಿ ಸವಿದು ಅರ್ಪಿಸಿದುದು ಆದಾವ ಲಿಂಗಕ್ಕೆ?*
*ಕರ ಮುಟ್ಟಿದ ಸೋಂಕಿನ ಸುಖ ಆದಾವ ಲಿಂಗಕ್ಕೆ ?*
*ಇಂತೀ ಪಂಚೇಂದ್ರಿಯಗಳಲ್ಲಿ ಅರ್ಪಿಸಿಕೊಂಬ*
*ಆತ್ಮದ ತೃಪ್ತಿ ಐದೋ ಮೂರೋ ಬೇರೆರಡೋ ಏಕವೋ?*
*ಎಂಬುದ ನಿಧಾನಿಸಿ ಬಹುವಸ್ತುವ ಕುಂಭದಲ್ಲಿ ಅಗ್ನಿಯನಿರಿಸಿ*
*ಉರುಹಲಿಕೆ ವಸ್ತು ವಸ್ತುಕ್ಕೆ ತಪ್ಪದೆ ಕಿಚ್ಚು ಹೊದ್ದಿ ತೋರುವುದು*
*ವಸ್ತುವ ಗುಣವೋ ? ಒಂದಗ್ನಿಯ ಗುಣವೋ ?*
*ಇಂತೀ ಗುಣವ ನಿಧಾನಿಸಿಕೊಂಡು*

*ನಿಜಪ್ರಸಾದವ ಕೊಂಬ ಸ್ವಯಂಪ್ರಸಾದಿಗೆ*
*ತ್ರಿವಿಧಪ್ರಸಾದ ಸಾಧ್ಯವಪ್ಪುದಲ್ಲದೆ ವರ್ತಕಪ್ರಸಾದಿಗಳಿತ್ತಲೆ ಉಳಿದರು*
*ದಹನ ಚಂಡೀಕೇಶ್ವರಲಿಂಗಕ್ಕೆ ಅರ್ಪಿತ ಮುಟ್ಟದೆ ಹೋಯಿತ್ತು.*
*[ಸಂ.ವ.ಸಂ-೩-ವ.೧೧೭]*

ಪ್ರಸಾದಿಯಾದವನು ಭಕ್ತಿಯಿಂದ ನಿರ್ಮಲಾಂತಕರಣ ದಿಂದ ಶುದ್ಧ ಮನಸ್ಸಿನಿಂದ ಪ್ರಸಾದವನ್ನು ಲಿಂಗಕ್ಕೆ ಅರ್ಪಿಸ ಬೇಕು. ಶರಣರ ಪ್ರಕಾರ ಅನ್ನವೊಂದೇ ಪ್ರಸಾದವಾಗುದೆಂದಲ್ಲ. ಆಚಾರ ಲಿಂಗಾರ್ಪಣವಾದ ಗಂಧ, ಲಿಂಗಾರ್ಪಣವಾದ ಶಬ್ದ. ಮಹಾಲಿಂಗಾರ್ಪಣ ವಾದ ತೃಪ್ತಿ. ಇವೆಲ್ಲವೂ ಪ್ರಸಾದವಾಗುತ್ತದೆ. ಅರ್ಪಣಕ್ಕೆ ಮೊದಲು ಪದಾರ್ಥ ಹಲವು, ಅರ್ಪಿಸಿದ ಬಳಿಕ ಅರ್ಪಿತವಾದ ಬಳಿಕ ಪ್ರಸಾದ ಒಂದು ಇದಕ್ಕೆ ಅನುಭಾವಿ ಅಲ್ಲಮಪ್ರಭು ತನ್ನ ವಚನದಲ್ಲಿ ಪ್ರತಿಪಾದಿಸಿದ್ದಾರೆ.

*ಶಬ್ದವೆಂಬನೇ ? ಶ್ರೋತ್ರದೆಂಜಲು*
*ಸ್ಪರ್ಶನವೆಂಬನೇ ? ತ್ವಕ್ಕಿನೆಂಜಲು*
*ರೂಪೆಂಬನೆ ? ನೇತ್ರದೆಂಜಲು*
*ರುಚಿಯೆಂಬೆನೆ ? ಜಿಹ್ವೆಯೆಂಜಲು*
*ಪರಿಮಳವೆಂಬನೆ ? ಘ್ರಾಣದೆಂಜಲು*
*ನಾನೆಂಬೆನೆ ? ಅರಿವಿನೆಂಜಲು*
*ಎಂಜಲೆಂಬ ಭಿನ್ನವಳಿದ*
*ಬೆಳಗಿನೊಳಗಣ ಬೆಳಗು ಗುಹೇಶ್ವರನೆಂಬ ಲಿಂಗಕ್ಕೆ.*

ಅಲ್ಲಮಪ್ರಭು ಹೇಳುವಂತೆ ಈ ಪದಾರ್ಥಗಳೆಲ್ಲವೂ ಐಂದ್ರಿಕ ಸೂತಕದಿಂದ ಕೂಡಿವೆ. ಈ ಪರಮ ಪದಾರ್ಥ ಮಾತ್ರ ಎಂಜಲಿಗೆ ನಿಲುಕದು. ಐಂದ್ರಿಕ ಸೂತಕಕ್ಕೆ ಎಟುಕದು. ಅದು ಬೆಳಗಿನೊಳಗಿನ ಬೆಳಗು, ಪರಮ ಪಾವನ ಪ್ರಸಾದ ಅದರಿಂದ ಪರಿಮಿತಿಯಿಲ್ಲದ ಪರಿಣಾಮ. ಅದರದು ಪ್ರಮಾಣವಿಲ್ಲದ ಪ್ರತಿಭೆ, ಅದು ಪರಂಜ್ಯೋತಿ.

ಲಿಂಗಕ್ಕೆ ಅರ್ಪಣವಾದಾಗ ಶಬ್ದಾದಿ ಪರಾರ್ಥಗಳೂ ಸೂತಕದಿಂದ ದೂರವಾಗುತ್ತವೆ. ಆ ಮಹಾಜ್ಯೋತಿ ಪ್ರಸಾದ ಲಿಂಗವಾಗಿ ಒಂದು ಶಬ್ದ ಸೂತಕವನ್ನು ಕಳೆಯುತ್ತದೆ. ಜಂಗಮಲಿಂಗವಾಗಿ ಒಂದು ಸ್ಪರ್ಶಸೂತಕ ವನ್ನು ಶಿವಲಿಂಗವಾಗಿ ರೂಪಸೂತಕವನ್ನು ಗುರುಲಿಂಗ ವಾಗಿ ರುಚಿಸೂತಕ ವನ್ನು ಆಚಾರ ಲಿಂಗವಾಗಿ ಗಂಧ ಸೂತಕವನ್ನು ಮಹಾ ಲಿಂಗವಾಗಿ ಜೀವಸೂತಕವನ್ನು ಕಳೆಯುತ್ತದೆ.

ಪ್ರಸಾದಿಯು ಭಕ್ತಿಯಿಂದ ಪ್ರಸಾದವನ್ನು ಪಂಚೇಂದ್ರಿಯಗಳಿಗೆ ನಂತರ ಗುರು, ಲಿಂಗ, ಜಂಗಮಕ್ಕೆ ಅನಂತರ ಗುರು ಜಂಗಮರಿಗೆ ಅರ್ಪಿಸಿ ಕೊನೆಗೆ ಲಿಂಗಕ್ಕೆ ಅರ್ಪಿಸಬೇಕು.

ಹೊಡೆಹುಲ್ಲ ಬಂಕಣ್ಣ ಸ್ವಯಂ ಪ್ರಸಾದಿಯ ಬಗ್ಗೆ ತನ್ನ ಭಾವನೆಗಳನ್ನು ಅಭಿವ್ಯಕ್ತಪಡಿಸಿದ್ದಾನೆ.

*"ಸ್ವಯಂ ಪ್ರಸಾದಿ ಗುರುಪ್ರಸಾದವನೊಲ್ಲ, ಲಿಂಗ ಪ್ರಸಾದವ ಕೊಂಬ, ಜ್ಞಾನಪ್ರಸಾದಿ ಜಂಗಮ ಪ್ರಸಾದವ ಕೊಂಬ-ಲಿಂಗ ಪ್ರಸಾದವನೊಲ್ಲ, ಮಹಾಪ್ರಸಾದಿ ಪ್ರಸನ್ನ ಪ್ರಸಾದವ ಕೊಂಬ-ಜಂಗಮಪ್ರಸಾದವನೊಲ್ಲ ಇಂತೀ ತ್ರಿವಿಧ ಪ್ರಸಾದದ ಭೇದವನರಿದು ಒಂದನೊಡಗೂಡಿ ಒಂದನರ್ಪಿಸಬೇಕು. ಆ ಉಭಯವನೊಡಗೂಡಿ ಪ್ರಸನ್ನ ಪ್ರಸಾದದ ಲಿಂಗಕ್ಕೆ ಕೊಟ್ಟು ಕೊಳಬಲ್ಲ ಮಹಾಪ್ರಸಾದಿಗೆ ಕುಂಭೇಶ್ವರ ಲಿಂಗದಲ್ಲಿ ಜಗನ್ನಾಥಂಗೆ ನಮೋ ನಮೋ ಎನುತಿರ್ದೆನು".*

ಈ ವಚನವನ್ನು ಕುರಿತು ಶ್ರೀ ಜ.ಚ.ನಿ ಅವರು ತುಂಬಾ ಅರ್ಥಪೂರ್ಣವಾಗಿ ವಿವೇಚಿಸಿದ್ದಾರೆ.

ನಿತ್ಯವಾದ ನಿಖಿಲ ವ್ಯಾಪ್ತವಾದ ಮಹಾಲಿಂಗ ಸ್ವರೂಪ ನಿಷ್ಕಲಿಂಗದ ಪ್ರಸನ್ನತೆಯನ್ನು ಪಡೆದ ಪ್ರಸಾದಿ ಗುರುಲಿಂಗ ಜಂಗಮರನ್ನು ಭಿನ್ನವಿಟ್ಟು ಅವರ ಪ್ರಸಾದಗಳನ್ನು ಸ್ವೀಕರಿಸನು. ಸಮರಸ ಭಾವದಲ್ಲಿ ಸ್ವೀಕರಿಸುವನು ಎಂದು ಹೇಳುವುದೇ ಈ ವಚನಾಭಿಪ್ರಾಯ. ಕ್ರಿಯಾ ಪ್ರಸಾದಿಯನ್ನೇ ಇಲ್ಲಿ ಸ್ವಯ ಪ್ರಸಾದಿಯೆಂದು ಕರೆಯಲಾಗಿದೆ. 'ಸ್ವಯ ಪ್ರಸಾದಿ' ಎಂಬಲ್ಲಿನ ಸ್ವಯ ಪದದ ವಾಚ್ಯಾರ್ಥವನ್ನು ಗುಮನಿಸಿ ಅರ್ಥವಿಸಲಾಗಿದೆ. ಆದರೂ ಗುರುಪ್ರಸಾದ ವಿಲ್ಲದೆ ಲಿಂಗ ಪ್ರಸಾದವಾಗದು. ಆದರೂ ಗುರುಪ್ರಸಾದ ವಿಲ್ಲದೆ ಲಿಂಗಪ್ರಸಾದವಾದರೆ ಗುರುಪ್ರಸಾದ ಬೇರೆ, ಲಿಂಗ ಪ್ರಸಾದ ಬೇರೆ, ಎಂಬ ಭಿನ್ನಭಾವವಿಲ್ಲದೆ ಇರಬೇಕೆಂಬುದೇ ಈ ವಚನದ ತಾತ್ಪರ್ಯ.

ಶರಣ ಪ್ರಸಾದಿ ಲೆಂಕ ಬಂಕಣ್ಣ ಮತ್ತೊಂದು ವಚನದಲ್ಲಿ ಪ್ರಸಾದಿ ಸ್ಥಲದ ಬಗ್ಗೆ ತನ್ನದೇ ಆದ ವಿಚಾರಗಳನ್ನು ಹಂಚಿಕೊಂಡಿದ್ದಾರೆ.





*ಗುರುವಿಂಗೆ ಜೀವ ಪ್ರಸಾದ, ಚರಕ್ಕೆ ಭಾವ ಪ್ರಸಾದ*
*ಜೀವಭಾವದಲ್ಲಿ ಕೂಡಲಿಕ್ಕಾಗಿ ಪರಮಪ್ರಸಾದ.*
*ಆ ಪರಮಪ್ರಸಾದ ವ್ಯತಿರಿಕ್ತವಾಗಿ ಕಾಣಿಸಿಕೊಂಡಲ್ಲಿ*
*ಪ್ರಸಾದವಾಯಿತ್ತು.*
*ಆ ಲಿಂಗ ಪ್ರಸಾದ ತನಗಾಗಲಾಗಿ*
*ಸ್ವಯಪ್ರಸಾದವಾಯಿತ್ತು.*
*ಇಂತೀ ಪ್ರಸಾದಿಸ್ಥಲ ವಿವರಂಗಳ ತಿಳಿದು*
*ಲಿಂಗಕ್ಕೆ ಕೊಟ್ಟು ಕೊಳಬೇಕು.*
*ದಹನ ಚಂಡಿಕೇಶ್ವರಲಿಂಗಕ್ಕೆ ಅರಿದು ಅರ್ಪಿಸಬೇಕು.*
*(ಸಂಕೀರ್ಣ ವಚನ ಸಂಪುಟ-೩. ವ-೧೨೦)*

ಈ ವಚನದಲ್ಲಿ ಗುರು, ಜಂಗಮ ಮತ್ತು ಲಿಂಗಕ್ಕೆ ಅರ್ಪಿಸುವ ಪ್ರಸಾದದ ಬಗ್ಗೆ ಮಾರ್ಮಿಕವಾಗಿ ಹೇಳಿದ್ದಾನೆ. ಪ್ರಸಾದ ಸ್ಥಲದ ಬಗ್ಗೆ ಹೇಳಿರುವ ಲೆಂಕದ ಬಂಕಣ್ಣ, ಪ್ರಸಾದಿ, ಗುರುಲಿಂಗ, ಜಂಗಮ ಭಕ್ತ ಶರಣ, ಪ್ರಸಾದದ ಬಗ್ಗೆಯೂ ಹೇಳಿದ್ದಾನೆ.

ಒಟ್ಟಿನಲ್ಲಿ ನಮಗೆ ದೊರೆತಿರುವ ೧೨ ವಚನಗಳಲ್ಲಿ ಪ್ರಸಾದಿ ಸ್ಥಲದ ವಿವಿಧ ಬಗೆಗಳನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸುವ ಪ್ರಸಾದದ ಬಗ್ಗೆ ಹೇಳಿದ್ದಾನೆ. ಇವನ ವಚನಗಳು ಮೇಲೆ ನೋಟಕ್ಕೆ ಸರಳವಾಗಿ ಕಂಡರೂ, ಒಳಹೊಕ್ಕು ನೋಡಿದಾಗ ವಿಪುಲ ವಿಚಾರಗಳು ನಮ್ಮ ಮುಂದೆ ಅನಾವರಣಗೊಳ್ಳುತ್ತವೆ.

**ಆಕರ ಗ್ರಂಥಗಳು :**


೧. ಶ್ರೀ ಚಚನಿ ಸಾಹಿತ್ಯ : ಜೀವನ ಸಿದ್ಧಾಂತ ಪ್ರಸಾದಿ ಸಂಪುಟ ಸಂ. ಡಾ. ಎಂ.ಜಿ. ನಾಗರಾಜ್ ಪ್ರಕಾಶಕರು : ಶ್ರೀ ನಿಡುಮಾಮಿಡಿ ಜಗದ್ಗುರು ಮಠ, ಗೂಳೂರು ಸಂಸ್ಥಾನ ಮಠ

೨. ಸಂಕೀರ್ಣ ವಚನ ಸಂಪುಟ-೩, ಸಂ. ಡಾ. ಬಿ.ಆರ್. ಹಿರೇಮಠ ಪ್ರ. ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೩. ವಚನ ಪರಿಭಾಷಕೋಶ. ಸಂ. ಡಾ. ಎಸ್.ಜಿ. ಮಹಾದೇವಪ್ಪ-ಪ್ರ. ಕನ್ನಡ ಪುಸ್ತಕ ಪ್ರಾಧಿಕಾರ.

೪. ವಚನ-ಸಂ. ಡಾ. ಎಂ.ಎಂ. ಕಲಬುರ್ಗಿ ಪ್ರ. ಬಸವ ಸಮಿತಿ, ಬೆಂಗಳೂರು


○

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಓದುಗರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಪತ್ರಿಕೆ ಮುನ್ನಡೆ ಅಸಾಧ್ಯವಾಗಿದೆ. ಪೇಪರ್, ಪ್ರಿಂಟಿಂಗ್, ಪೋಸ್ಟೇಜ್ ಇನ್ನಿತರೆ ಖರ್ಚು ವೆಚ್ಚಗಳು ದುಬಾರಿಯಾಗಿದೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/- ರೂ. ಆಜೀವ ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ. ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಪ್ರಸಾರ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಹಿಂಜರಿತ ದಯವಿಟ್ಟು ಅರ್ಥಮಾಡಿಕೊಳ್ಳಿ.

**ಪ್ರಸ್ತುತ ಆಜೀವ ಚಂದಾ ೨೦೧೪ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿ ರುವವರು ಬಾಕಿ ೫೦೦/- ಸಂದಾಯ ಮಾಡಬೇಕು.**

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ **ನಗದು /ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ LM ನಂಬರ್ ಸೂಚಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರುತ್ತೇವೆ.

**'ಸಿದ್ಧಗಂಗಾ'** ಮುನ್ನಡೆಗೆ ಬಾಕಿ ಸಂದಾಯ ಮಾಡಿ ಸಹಕರಿಸಬೇಕಾಗಿ ನಮ್ರ ವಿನಂತಿ.


**ಪ್ರಕಾಶಕರು,** 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322

# ಯುವಕರಲ್ಲಿ ದುಡಿಮೆಯ ಜಾಗೃತಿ ಅರಳಿಸುವುದಗತ್ಯ

– ಡಾ. ರುದ್ರಣ್ಣ ಚಿಲಮಿ *

ಇಂದಿನ ಯುವಕರಲ್ಲಿ ಹಿರಿಯರ ಬಗೆಗೆ ಕಾಳಜಿಯಿಲ್ಲ. ತಂದೆ-ತಾಯಿಗಳೇ ನಿಜವಾದ ಜೀವಂತ ದೇವರೆಂಬುದನ್ನು ಅರಿತುಕೊಳ್ಳಬೇಕು. ಕಲಿಯುವ ವಯಸ್ಸಿನಲ್ಲಿ ಸರಿಯಾಗಿ ವಿಧೇಯತೆಯಿಂದ ಗುರುವಿನ ಮಾರ್ಗ ದರ್ಶನ ವಿದ್ಯಾಸಂಪಾದನೆ ಮಾಡಿಕೊಳ್ಳಬೇಕು. ಗುರುವೇ ನನಗೆ ಎರಡನೆಯ ತಾಯಿ ಭಾವನೆಯಿರಬೇಕು. ನಾಡಿನ –ಊರಿನ– ದೇಶದ ಬಗ್ಗೆ ಅಭಿಮಾನವಿರಬೇಕು. ಮಗುವಿನ ಆಂತರಿಕ ಹಾಗೂ ದೈಹಿಕ ಬೆಳವಣಿಗೆಗೆ ಧಾರ್ಮಿಕ ಪರಿಸರವೇ ಪ್ರಮುಖ ಕಾರಣ. ಇಂದಿನ ಮಕ್ಕಳು ನಾಳಿನ ನಾಗರಿಕರು ಎಂಬ ಸುಪ್ರಸಿದ್ಧ ಗಾದೆಯಿದೆ. ಆದರೆ ಇಂದಿನ ಯುವಕರು ಸರಿಯಾದ, ಧಾರ್ಮಿಕ, ನ್ಯಾಯಯುತ ದಾರಿಯಲ್ಲಿ ಕ್ರಮಿಸುತ್ತಿಲ್ಲವೆಂಬ ಕೊರಗು ನನ್ನದು! ಅವರ ಮನಪರಿವರ್ತನೆ ಮಾಡಬೇಕಾಗಿದೆ. ಧರ್ಮಾತ್ಮರು, ರಾಜ ಕಾರಣಿಗಳು ಇಂಥ ಯುವಶಕ್ತಿಯ ಕಡೆಗೆ ಹೆಚ್ಚಿನ ಮುಖ ಮಾಡಬೇಕಾಗಿದೆ. ರಾಜ್ಯವಾಗಲಿ, ಕೇಂದ್ರವಾಗಲಿ ಮಕ್ಕಳ ಕಲಿಕೆಯಲ್ಲಿ ನೀತಿಯ ಪಾಠ, ಯೋಗದ ಪಠ್ಯ, ಆಧ್ಯಾತ್ಮದ ಅಭ್ಯಾಸ ಅವಶ್ಯವಾಗಿ ರಚಿಸುವಂತಹ ಆದೇಶದ ಔದಾರ್ಯ ತೋರಿಸಬೇಕು. ನಮ್ಮದು ಇಂದಿನ ಶಿಕ್ಷಣವು ಮೆಕಾಲಿ ಪದ್ಧತಿಯನ್ನೇ ಮುಂದುವರೆಸಿಕೊಂಡು ಬರುತ್ತಲಿದೆ. ಇಂದಿನ ವಿದ್ಯಾರ್ಥಿ ಕೇವಲ ಪುಸ್ತಕದ ಕೀಟವಾಗದೆ, ಸಮಾಜದ ಆಗು-ಹೋಗು, ಸ್ಥಿತಿ-ಗತಿಗಳನ್ನು ಅರಿಯುವ ಬೋಧನಾ ಕ್ರಮವಾಗಬೇಕು.

ಮಕ್ಕಳಲ್ಲಿ ವಿದ್ಯೆಯ ಸಂಸ್ಕಾರದ ಜೊತೆಜೊತೆಗೆ ಕಾಯಕ ಅಥವಾ ದುಡಿಮೆ(ಕೆಲಸ)ಯ ಪ್ರಜ್ಞೆಯನ್ನು ಮೂಡಿಸಬೇಕು. ಕುಟುಂಬ, ಊರು, ನಾಡು, ದೇಶ ಅಭಿವೃದ್ಧಿಯಾಗಬೇಕಾದರೆ ಪ್ರತಿಯೊಬ್ಬರೂ ದುಡಿದುಣ್ಣ ಬೇಕೆಂಬ ಛಲ ಮೂಡಿಸಬೇಕು. ಶಿವಶರಣರ ಕಾಯ(ಕ)ವೇ ಕೈಲಾಸ ಎಂಬ ಸಿದ್ಧಾಂತವನ್ನೇ ಮಕ್ಕಳಿಗೆ ತಿಳಿಸುವುದಾಗ ಬೇಕು. ದೇಶದ ಅಭಿವೃದ್ಧಿಂಯಾಗಬೇಕಾದರೆ ಪ್ರತಿಂಯೊಬ್ಬರೂ ದುಡಿಯಬೇಕಾದುದು ಅನಿವಾರ್ಯ. ಮತ್ತೊಬ್ಬರ ಮೇಲೆ ಅವಲಂಬಿತರಾಗದಾರದೇ ತಾನು ದುಡಿದೇ ಉಣ್ಣಬೇಕು. ತನಗೆ ಬೇಕಾಗುವ ಅನ್ನ, ಬಟ್ಟೆ, ವಸತಿ, ತನ್ನ ದುಡಿಮೆಯಿಂದಲೇ ಮಾಡಿಕೊಳ್ಳಬೇಕು. ತನ್ನದೇ ದುಡಿಮೆಯಿಂದ ಬಂದ ಅನ್ನ ರುಚಿಸುತ್ತದೆ. ಮತ್ತೊಬ್ಬರ ದುಡಿಮೆಯಿಂದ ಬದುಕಬಾರದು. ಒಂದು ವೇಳೆ ಮತ್ತೊಬ್ಬರ ದುಡಿಮೆಯಲ್ಲಿ ತಿಂದುಂಡು ಬದುಕಿದರೆ ಅವರ ಋಣದಲ್ಲಿ ಬೀಳ ಬೇಕಾಗುತ್ತದೆ. ಈ ತರಹದ ಬದುಕು ಏತರ ಬದುಕು? ಅವಮಾನಕರ ಬದುಕು ಎನಿಸಿಕೊಳ್ಳುತ್ತದೆ. ಆದುದರಿಂದ ಪ್ರತಿಯೊಬ್ಬ ಯುವಕ ಇಂದು ಯಾವುದು ಸರಿ, ಯಾವುದು ತಪ್ಪು ಎಂಬುದನ್ನು ಅರಿತು ಆಚರಿಸಿದರೆ ಅವಘಡಗಳು ತಪ್ಪುತ್ತವೆ. ಅದಕ್ಕಾಗಿ ದುಡಿಮೆಯಲ್ಲಿಯೇ ದೇವರನ್ನು ಕಾಣುವುದು. ಕಾಯಕ ಮಾಡದೇ ಉಣ್ಣದಿರುವುದು, ಮತ್ತೊಬ್ಬರಿಗೆ ಅಂದರೆ ಅಂಗವಿಕಲರಿಗೆ, ನಿರ್ಗತಿಕರಿಗೆ, ಅನಾಥರಿಗೆ ಸಹಾಯ ಮಾಡುವುದು ಇಂತಹ ಉದಾತ್ತ ಧ್ಯೇಯವನ್ನಿಟ್ಟು ಬದುಕು ಸಾಗಿಸಿದರೆ ತನಗೂ, ನಾಡಿಗೂ ದೇಶಕ್ಕೂ ಹಿತವಾಗುತ್ತದೆ. ಸತತ ದುಡಿಮೆಯಲ್ಲಿ ತೊಡಗಿದರೆ ಯಾವ ರೋಗ-ರುಜಿನಗಳ ಬಾಧೆ ತಟ್ಟ ಲಾರವು. ದೇಹದಾರ್ಢ್ಯ ವೃದ್ಧಿಸುವುದು ಆರೋಗ್ಯವೇ ಭಾಗ್ಯವಾಗುವುದು ಖಚಿತ. ದುಡಿಯಲಾರದೇ ಅನ್ಯರ ದುಡಿತದಲ್ಲಿ ಬದುಕಿದರೆ ಒಬ್ಬರ ಹಂಗಿನೊಳಗೇ ಬಿದ್ದಂತೆ. 'ಹಂಗೀನ ಬಾನ ಉಣಲಾರ' ಎಂದಿದ್ದಾರೆ ಜನಪದರು. ಈ ಮಾತಿನ ಮೌಲ್ಯವನ್ನರಿತುಕೊಳ್ಳಬೇಕು.

ದುಡಿತವೇ ದುಡ್ಡಿನ ತಾಯಿ ಎಂಬ ಜಾಣ್ನುಡಿ ಸುಳ್ಳಲ್ಲ. ದುಡಿತದಿಂದ ಬದುಕೂ ಸುಗಮ ಮತ್ತು ಚೇತೋಹಾರಿಯಾಗುತ್ತದೆ. ತಾನು ದುಡಿದದ್ದೇಯಾದರೆ ದುಡಿಯುವ ಶಕ್ತಿಯಿಲ್ಲದ ಹತ್ತು ಮಂದಿಯ ಹೊಟ್ಟೆ ತುಂಬಿಸುವವನು ದೇವರ ಸರಿಸಮಾನವೆಂಬ ಮಾತೊಂದಿದೆ. ದುಡಿದ ಬೆವರಿನಲ್ಲಿ ದೇವರಿದ್ದಾನೆ ಎಂದು ತೋರಿಸಿಕೊಟ್ಟವರು ಶಿವಶರಣರು ಎಂಬುದು ಸತ್ಯ ಸಂಗತಿ. ಶರಣರ ದೃಷ್ಟಿಯಲ್ಲಿ ದುಡಿದು ಬದುಕುವುದೆಂದರೆ ಕಾಯಕದಲ್ಲಿ ಕೈಲಾಸವನ್ನು ಕಂಡಂತೆ. ಕೈಲಾಸವಿದ್ದಲ್ಲಿ ಶಿವನಿದ್ದಾನೆ. ದುಡಿಮೆಯಲ್ಲಿ ದೇವರಿದ್ದಾನೆ. ಆದ ಕಾರಣ ಇಂದಿನ ಯುವಕ-ಯುವತಿಯರ ಕಾಯಕಕ್ಕೆ ದುಡಿತಕ್ಕೆ ಹೆಚ್ಚು ಮಹತ್ವತೆ ಕೊಡಬೇಕು. ದುಡಿತದಲ್ಲಿರುವವರಿಗೆ ಯಾವುದೇ ದುಷ್ಟ ವಿಚಾರಗಳು ಬರಲಾರವು. ದುರ್ವ್ಯಸನ ಗಳೂ ಅಂಥವರ ಸುತ್ತ ಸುಳಿಯಲಾರವು. ಇಂದು ದುಡಿಯುವವರ ಸಂಖ್ಯೆ ಕಡಿಮೆಯಾದುದು ಕಂಡುಬರುತ್ತದೆ. ಸರ್ಕಾರವೂ ಯುವಶಕ್ತಿಗೆ ದುಡಿಮೆಯ ಪ್ರವೃತ್ತಿ ಉಂಟಾಗುವ ರೀತಿಯಲ್ಲಿ ಉದ್ಯೋಗನಿರತ ಕೋರ್ಸುಗಳನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಪ್ರಾರಂಭಿಸಬೇಕು. ಪ್ರತಿಯೊಬ್ಬ ಯುವಕನೂ ಕಾಯಕದ ಪ್ರಜ್ಞೆಯಿಂದ ಕಾಯಕದಲ್ಲಿ, ದುಡಿತದಲ್ಲಿ ತಾನು ಶ್ರದ್ಧಾ, ಭಕ್ತಿಯಿಂದ ತೊಡಗಿದ್ದೇಯಾದರೆ ತನಗೂ, ಕುಟುಂಬಕ್ಕೂ, ಸಮಾಜಕ್ಕೂ ನಾಡಿಗೂ, ದೇಶಕ್ಕೂ ಹಿತವಾಗಿ ಅಭಿವೃದ್ಧಿಯಾಗಲು ಸಾಧ್ಯವಿದೆ. ಆದುದರಿಂದ ಈ ಲೇಖನ ಓದುವ ಯುವಕರೇ ನನ್ನ ಈ ಮಾತುಗಳ ಕಡೆಗೆ ಚಿತ್ತೈಸುವಿರೆಂದು ಭಾವಿಸಿದ್ದೇನೆ. ನಿಮ್ಮಿಂದಲೇ ದೇಶದ ಪ್ರಗತಿಯಾಗಬೇಕಾಗಿದೆಯಾದ ಕಾರಣ ಇಂತೆಲ್ಲ ಮಾತುಗಳನ್ನು ಹಂಚಿಕೊಳ್ಳಲಾಯಿತು. ಉದಾರತೆಯಿಂದ ಈ ನುಡಿಗಳನ್ನು ಸ್ವೀಕರಿಸಿ, ಪಾಲಿಸುತ್ತೀರೆಂಬ ಭರವಸೆಯೂ ನನ್ನಲ್ಲಿದೆ.

* 'ಹೊಂಬೆಳಕು', ಮ.ನಂ. ೦೭, ಓಂ ಸ್ಕೂಲ್ ಹತ್ತಿರ, ಜಲದರ್ಶಿನಿನಗರ, ಧಾರವಾಡ-೫೮೦ ೦೦೭.

## ಸಿದ್ಧಗಂಗಾ ಮಾಸಪತ್ರಿಕೆ ಚಂದಾದಾರರ ಗಮನಕ್ಕೆ

ಚಂದಾದಾರರ ಸರಿಯಾದ ವಿಳಾಸವಿಲ್ಲದೆ ಪತ್ರಿಕೆಗಳು ನಮ್ಮ ಕಾರ್ಯಾಲಯಕ್ಕೆ ಹಿಂದಕ್ಕೆ ಬರುತ್ತಿವೆ. ತಾವು ದಯವಿಟ್ಟು ವಿಳಾಸ ಬದಲಾವಣೆಯಾದಲ್ಲಿ ಚಂದಾದಾರರ ಸಂಖ್ಯೆ ಹಾಗೂ ಅಂಚೆ ಪಿನ್‌ಕೋಡ್ ಇರುವ ಸರಿಯಾದ ವಿಳಾಸದ ಜೊತೆಗೆ ಮೊಬೈಲ್ ಫೋನ್‌ಸಂಖ್ಯೆ ಸಹ ಪತ್ರಿಕೆ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

– ಪ್ರಕಾಶಕರು

## ನಡೆದಾಡುವ ದೇವರು

೨೦೧೫ನೇ ಸಾಲಿನ ಭಾರತದ ಗಣರಾಜ್ಯೋತ್ಸವ ಸಂದರ್ಭದಲ್ಲಿ ಪ್ರಕಟಿಸಲಾದ 'ಪದ್ಮಭೂಷಣ' ಪ್ರಶಸ್ತಿಯ ಸಾಲಿನಲ್ಲಿ ಶ್ರೀ ಸಿದ್ಧಗಂಗಾ ಮಠದ ಕರ್ನಾಟಕರತ್ನ, ನಡೆದಾಡುವ ದೇವರು ಡಾ॥ ಶ್ರೀ ಶ್ರೀ ಶಿವಕುಮಾರಮಹಾ ಸ್ವಾಮಿಗಳವರ ಹೆಸರು ಇದ್ದದ್ದು ನೋಡಿ ತುಂಬ ಸಂತೋಷವಾಯಿತು. ಆದರೆ ಈ ಸಂತೋಷ ಬಹುಕಾಲ ಉಳಿಯಲಿಲ್ಲ.

ಯಾವುದೇ ಪ್ರಶಸ್ತಿ ಪುರಸ್ಕಾರಗಳನ್ನು ಬಯಸದ ಪೂಜ್ಯರಿಗೆ ಈ ಪ್ರಶಸ್ತಿ ಅವಶ್ಯಕತೆ ಇತ್ತೆ ಎನಿಸುತ್ತದೆ. 'ಕರ್ನಾಟಕರತ್ನ' ಪರಮಪೂಜ್ಯರು 'ಬ್ರಹ್ಮ ಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯನೊಲ್ಲೆ, 'ಕರಿಯ ನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ, ಹಿರಿದಪ್ಪ ರಾಜ್ಯ ವಿತ್ತಡೆಯೂ ಒಲ್ಲೆ' ಎಂಬ ಶರಣರ ವಾಣಿಯನ್ನು ಕಣಕಣ ತುಂಬಿಕೊಂಡಿರುವ ಮಹಾ ಶಿವಯೋಗಿವರ್ಯರಿಗೆ ಭಕ್ತ ಕೋಟಿ ನಡೆದಾಡುವ ದೇವರು ಎಂದು ಅರ್ಪಿಸಿರುವ ಪ್ರಶಸ್ತಿಯ ಮುಂದೆ ಮತ್ತಾವ ಪ್ರಶಸ್ತಿ?

ಕೇಂದ್ರ ಸರ್ಕಾರ 'ಭಾರತರತ್ನ' ಪ್ರಶಸ್ತಿಗೆ ಆಯ್ಕೆ ಮಾಡಿದ್ದರೆ ಅದು ಸೂಕ್ತವೆನಿಸುತ್ತಿತ್ತು. ಅಂತಹ ಸುಸಂದರ್ಭವನ್ನು ಶ್ರೀಮಠದ ಭಕ್ತಕೋಟಿ ನಿರೀಕ್ಷಿಸುತ್ತದೆ.

*ಪ್ರಕೃತಿ ಒಲಿದಿರಲಿ ಮುನಿದಿರಲಿ*
*ಕೋಳಿ ಕೂಗದ ಮುನ್ನ ದಿನದ ಶುಭಾರಂಭ*
*ಸ್ನಾನ ಮೌನ ಜಪ ತಪ ಅನುಷ್ಠಾನ*
*ಭಸಿತ ರುದ್ರಾಕ್ಷಿ ಧಾರಣ ಶ್ರೀ ರುದ್ರಮಂತ್ರಪಠಣ*
*ಕರದಿಷ್ಟದಲ್ಲಿ ಮನ ನೇತ್ರ ಮಿಲನ*
*ಭಾವ ಸಮಾಧಿಯಲ್ಲಿ ಹರನ ದರ್ಶನ*
*ದರ್ಶಿಸಿದವರ ಕಣ್ಣನ ಪಾವನ*
*ಡಾ॥ ಶ್ರೀ ಶಿವಕುಮಾರ ಗುರುವರರು*
*ನಡೆದಾಡುವ ದೇವರು ನೋಡಾ*
*ಶ್ರೀ ಗುರು ವೀರೇಶ್ವರಾ!*

– ವೀರೇಶ (ಪಿ.ಎಂ. ವೀರಣ್ಣ),
ವಿಜಯಪುರ

# ಜವಾಬ್ದಾರಿ ಪೂರೈಸಿ ಮುನ್ನಡೆದಷ್ಟು ನಿಜವುಳ್ಳ ನೆಮ್ಮದಿ-ಸಂತಸ

- ಸ.ರಾ. ಸುಳಕೂಡೆ *

**ಪೀಠಿಕೆ**

ಜಗತ್ತು ಹಲವು-ಹತ್ತು ಚಟುವಟಿಕೆಗಳ ಕೇಂದ್ರವಾಗಿದೆ. ಸೃಷ್ಟಿಯು ನಿರಂತರ ಕಾರ್ಯತತ್ಪರೆಯನ್ನು ಹೊಂದಿದೆ. ನಿತ್ಯ ಬರುವ ಸೂರ್ಯನು ಎಲ್ಲ ಚಟುವಟಿಕೆಗಳಿಗೆ ಶಕ್ತಿ ತುಂಬುತ್ತಲೇ ಇರುವುದು ಮಹತ್ತರ ಜವಾಬ್ದಾರಿಯನ್ನು ಸಂಕೇತಿಸುತ್ತದೆ. ಸೃಷ್ಟಿಯು ಪ್ರತಿ ಜೀವಿಯ ಬದುಕಿಗೆ ಒಂದೊಂದು ವಿಶಿಷ್ಟ ಗಾತ್ರ, ವಿನ್ಯಾಸ, ಬಣ್ಣ, ಶಕ್ತಿ, ಸಾಮರ್ಥ್ಯ ನೀಡಿದೆ. ಈ ಅವಕಾಶವನ್ನು ಬಳಸಿಕೊಳ್ಳುವುದೇ ಜೀವ ಜಗತ್ತಿನ ಕೌತುಕವೂ ಮತ್ತು ಜವಾಬ್ದಾರಿಯೂ ಆಗಿದೆ. ಆನೆಗೆ, ಆನೆಯ ಗಾತ್ರ ಭಾರವಿದ್ದರೆ ಇರುವೆಗೆ ಆಡಿಗೆ ತನ್ನದೇ ಗಾತ್ರ, ಭಾರವಿದೆ. ಆದರೆ ಮನುಷ್ಯನಿರುವ ಭಾರಗಳು ವಿಪರೀತವಾಗಿವೆ. ಈ ಭಾರಗಳನ್ನು ನಿರಾಭಾರಗಳನ್ನಾಗಿಸುವುದೇ ಮಾನವ ಕುಲದ ಮೇಲಿರುವ ದೊಡ್ಡ ಜವಾಬ್ದಾರಿಯಾಗಿದೆ. ನಿರಾಭಾರವಾಗುವುದೆಂದರೆ ಆಧಾರವನ್ನು ಬಿಟ್ಟು ಸ್ವಚ್ಛಂದತೆಯನ್ನು ಹೊಂದುವುದಲ್ಲ. ಮಾನವನ ಬದುಕಿಗೆ ಅಗಾಧತೆಯುಳ್ಳ ಆದೇಶಗಳು, ಜವಾಬ್ದಾರಿಗಳು, ಕರ್ತವ್ಯಗಳು, ಕಾರಣಗಳು ತುಂಬಿಕೊಂಡಿವೆ. ಮಾನವನು ಸಂಘ ಮತ್ತು ಸಮಾಜಜೀವಿಯಾಗಿದ್ದಾನೆ. ವಿವೇಚನೆಯುತ, ವಿವೇಕಯುತ ನಡಾವಳಿ, ರೀತಿ, ನೀತಿ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ತಾಂತ್ರಿಕ, ವೈದ್ಯಕೀಯ ಕ್ಷೇತ್ರದೊಂದಿಗೆ ಸುವ್ಯವಸ್ಥೆ, ಶಾಂತಿ, ನೆಮ್ಮದಿಯ ಗುರುತರ ಮೌಲ್ಯಗಳನ್ನು ಕಾಪಾಡುವ ಉದ್ದೇಶದ ನಿರ್ವಹಣೆಯ ಜವಾವ್ದಾರಿಯು ಮಾನವ ಕುಲದ ಆದ್ಯತೆಯಾಗಿದೆ. ಸಕಲದರೊಳಗೆ ಸುವ್ಯವಸ್ಥೆ, ಶಾಂತಿ, ಸಂರಕ್ಷಣೆ, ಸವಲತ್ತು, ಅನುಕೂಲತೆಗಳು ಸಮರ್ಪಕವಾಗಿ ಸಾಂಗವಾಗಿ ನಿರ್ವಹಣೆಯಾಗುವ ಕರ್ತವ್ಯದ ಜವಾಬ್ದಾರಿಯು ಮನುಕುಲದ ಜೀವಾಳವೇ ಆಗಿದೆ.

**ಮಾನವೀಯುತೆಗೆ ಬದ್ಧತೆ ಹೊಂದುವ ಜವಾಬ್ದಾರಿ ನಿಭಾಯಿಸಿದಷ್ಟು ಬದುಕಿಗೆ ನೆಮ್ಮದಿ :**

ಮನುಷ್ಯ ಜನ್ಮದ ಅವಕಾಶವೇ ಜವಾಬ್ದಾರಿಯುತವಾದ ನಡಾವಳಿಯಾಗಿದೆ. ಮನುಷ್ಯನೇ ಜೀವ ಜಗತ್ತಿನ ಕೇಂದ್ರವಾಗಿರುವುದರಿಂದ ಆತನ ಎಲ್ಲ ಚಟುವಟಿಕೆಗಳು ಕ್ರಮಬದ್ಧತೆಯಿಂದ ಕೂಡಿಕೊಂಡಿರುವುದು ಅತ್ಯಂತ ಪ್ರಾಶಸ್ತ್ಯತೆಯನ್ನು ಪಡೆದುಕೊಂಡಿದೆ. ಇದನ್ನೇ ಮಾನವೀಯತೆ, ಮಾನವ ಮೌಲ್ಯಗಳು, ಮಾನವೀಯ ನಡೆ-ನುಡಿಗಳು ಎಂದು ಪರಿಗಣಿಸಲಾಗುತ್ತಿದೆ. ಪರಪೀಡನೆ, ನೋವು, ಮೋಸ, ವಂಚನೆ, ದಬ್ಬಾಳಿಕೆ, ಹಿಂಸೆ, ಅಸತ್ಯ ಗಳೆಂಬ ನಕಾರಾತ್ಮಕ ನಡೆ-ನುಡಿಗಳು ಮಾನವೀಯ ಬದ್ಧತೆಗೆ ಬದ್ಧವೈರಿಗಳಾಗಿ, ಅಶಾಂತಿಯ ಪರ್ವಗಳಾಗಿ ನಿಂತಿವೆ. ಮಾನವೀಯತೆ ಕಾಪಾಡಿಕೊಳ್ಳುವ ಜವಾಬ್ದಾರಿ ಯನ್ನು ನೆನಪಿಸಲು ಜಗತ್ತಿನ ಎಲ್ಲೆಡೆಯಲ್ಲೂ ಕಾನೂನು, ಧಾರ್ಮಿಕತೆ, ಸಾಮಾಜಿಕ ಶಿಸ್ತುಗಳನ್ನು ಜಾರಿಗೆ ತರಲಾಗಿದೆ. ಮಾನವೀಯ ತುಡಿತ-ಮಿಡಿತಗಳಾಚೆ ವ್ಯವಹರಿಸುವ ಅಪರಾಧ ಅತಿರೇಕಗಳನ್ನು ನಿಭಾಯಿಸುವ ದಂಡನೆ, ಜೇಲು ಮುಂತಾದುವು ಚಾಲ್ತಿಯೊಳಗಿವೆ. ಸಭ್ಯತೆಯನ್ನು ಕಾಪಾಡು ವುದೇ ಮನುಕುಲದ ಜವಾಬ್ದಾರಿಯಾಗಿದೆ. ಈ ಜವಾಬ್ದಾರಿ ಯನ್ನು ಅರಿತು ತಪ್ಪದೇ ಪಾಲಿಸುವುದೇ ಶಾಂತಿ, ಸಮಾಧಾನ, ನೆಮ್ಮದಿಯ ಮಾರ್ಗವಾಗಿದೆ. ಜಗದೊಳಗೆ ವಿಪರೀತ ದಿವ್ಯಮಾನಗಳು, ವಿವಾದಗಳು ಸೃಷ್ಟಿಯಾಗುತ್ತಿರುವುದಕ್ಕೆ ಅಮಾನುಷ್ಯ ನಡೆ-ನುಡಿಗಳೇ ಕಾರಣಗಳಾಗಿವೆ. ಅನುಕೂಲತೆ, ಸ್ವಾರ್ಥಪರ ನಡಾವಳಿಗಳು ಬೇಜವಾಬ್ದಾರಿಯ ಸೆಳಕುಗಳೇ ಆಗಿವೆ. ಈ ಸೆಳಕುಗಳನ್ನು ದಾಟಿ, ಜವಾಬ್ದಾರಿ ನಿಭಾಯಿಸಿದ್ದಲ್ಲಿ ನೆಮ್ಮದಿ ಬದುಕಿದೆ.

ಕುಟುಂಬ ಬದುಕು ಮಾನವ ಸಂಬಂಧಗಳ ಜವಾಬ್ದಾರಿಯುತ ಸಂಘಟನೆಯಾಗಿದೆ. ಆಧುನಿಕತೆಯ ಸೆಳೆತಕ್ಕೆ ಸಿಲುಕಿರುವ ಕುಟುಂಬದ ಸದಸ್ಯರು ನಿತ್ಯ ಕಿತ್ತಾಟದೊಳಗೆ ಪೈಪೋಟಿಯೊಳಗೆ ಆಸಕ್ತರಾಗಿದ್ದಾರೆ. ತಮ್ಮ ತಮ್ಮ ಹಠಗಳನ್ನು ಸಾಧಿಸಿಕೊಳ್ಳಲು ಪಣ ತೊಟ್ಟಿರುವ ಕುಟುಂಬದ ಸದಸ್ಯರು, ಬದುಕಿನ ಮರ್ಮವನ್ನು ಜವಾಬ್ದಾರಿಯ ಸೊಬಗನ್ನು ಮರೆತು ವರ್ತಿಸುತ್ತಿದ್ದಾರೆ. ಕುಟುಂಬದೊಳಗೆ ನೆಮ್ಮದಿಯು ನೆಲೆಸದಂತೆ ನಡೆದುಕೊಳ್ಳುತ್ತಿರುವ ಇವರೆಲ್ಲರೂ ದುಶ್ಚಟಗಳ, ವ್ಯಸನಗಳ ದಾಸರಾಗಿ ಕೆಡಕುಗಳನ್ನೇ ಪಸರಿಸುತ್ತಿದ್ದಾರೆ.

* ನಂ. ೧೬೮, 'ಶಿವಪ್ರಸಾದ', ರಾಮತೀರ್ಥನಗರ, ಬೆಳಗಾವಿ-೫೯೦ ೦೧೫.





ಮಾನವೀಯ ಬದುಕಿಗಾಗಿ ಸೃಷ್ಟಿಗೊಂಡಿರುವ ಸಮಾಜವು ಲಾಲಸೆಗಳಿಂದ ತತ್ತರಿಸುತ್ತಲಿದೆ. ಅವರನ್ನು ಕಂಡರೆ ಇವರಿಗೆ ಇವರನ್ನು ಕಂಡರೆ ಅವರಿಗೆ ಆಗಿ ಬರುತ್ತಿಲ್ಲ. ಈ ತೆರನಾದ ವಿಷಮ ಪರಿಸ್ಥಿತಿಯಿಂದಾಗಿ ಮಾನವೀಯ ಗುಣವಿಶೇಷಗಳು, ನೆಮ್ಮದಿಯ ಕ್ಷಣಗಳು ಮಾಯವಾಗುತ್ತಲಿವೆ. ಮನುಷ್ಯರೆಲ್ಲರೂ ಮಾನವೀಯ ಅಂತಃಕರಣ, ಸದಾಶಯ, ಮಧುರತೆ ಬೆಳೆಸಿಕೊಳ್ಳುವುದು ಇಂದಿನ ಎಲ್ಲ ಅಗತ್ಯಗಳಲ್ಲಿ ಪ್ರಾಮುಖ್ಯವಾಗಿದೆ. ಈ ನಿಟ್ಟಿ ನೊಳಗೆ ಸಾಗುವುದೆಂದರೆ ಮಾನವೀಯ ಜವಾಬ್ದಾರಿಯನ್ನು ಮುನ್ನಡೆಸಿ ನೆಮ್ಮದಿ ಪಡೆಯುವುದಾಗಿದೆ.

**ಸ್ವ-ಧರ್ಮ ಪರಿಪಾಲನೆಯ ಜವಾಬ್ದಾರಿ ಕ್ರಿಯಾಶೀಲಗೊಳಿಸುವುದೇ ನಿಜವುಳ್ಳ ಸಂತಸಕ್ಕೆ ನಾಂದಿ:**

ಮಾನವನ ಬದುಕಿಗಿರುವ ಆದರ್ಶಗಳೇ ಆದ್ಯತೆಗಳೇ ಸ್ವಧರ್ಮ ಪರಿಪಾಲನೆಯ ಗುರುತರ ಜವಾಬ್ದಾರಿಯಾಗಿದೆ. ಪ್ರತಿಹಂತದಲ್ಲೂ ಚಾರಿತ್ರ್ಯ ನಿರ್ಮಿಸಿಕೊಳ್ಳುವ ಜವಾಬ್ದಾರಿಯ ಮಜಲುಗಳನ್ನು ಸೃಷ್ಟಿಸಲಾಗಿದೆ. ಮನುಷ್ಯನ ಬದುಕಿನೊಳಗೆ ಅನೇಕ ಆಸೆ-ಆಕಾಂಕ್ಷೆಗಳ ಗೋಜು-ಗದ್ದಲಗಳು ಸೇರಿಕೊಳ್ಳುವುದು ಸಹಜ ಪ್ರವೃತ್ತಿಯಾಗಿದೆ. ಈ ತರ-ತಮ ಭಾವ ತರಂಗಗಳು ಮಾನವೀಯ ಸಭ್ಯತೆ ಯನ್ನು ಮೀರುವಂತೆ ಮಾಡುತ್ತವೆ. ಹೀಗಾಗಿ ಸ್ವಧರ್ಮವು ಗೆರೆಯನ್ನು ದಾಟುತ್ತಲಿದೆ, ದುಡುಕಿ ನಿಲ್ಲುವ ಪ್ರಸಂಗವು ಎದುರಾಗುತ್ತದೆ. ಯಾರು ತಮ್ಮ ಸ್ವಧರ್ಮದ ನೆಲೆಯೊಳಗೆ ವರ್ತಿಸುವಷ್ಟು ಸಂಯಮವನ್ನು ಗಳಿಸಿಕೊಂಡಿರುತ್ತಾರೆ, ಅವರು ಮಾನವೀಯ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಇದೇ ನೆಮ್ಮದಿ ಬದುಕಿನ ರೂವಾರಿ ಆಗಿದೆ.

ಮಾನವನ ನಡಾವಳಿಗಳನ್ನು ಸರಿದಾರಿಗೆ ತರಲು ವಿವಿಧ ಧರ್ಮಗಳು ಪ್ರಚಲಿತಕ್ಕೆ ಬಂದಿವೆ. ಎಲ್ಲ ಧರ್ಮಗಳ ತತ್ವಸಿದ್ಧಾಂತಗಳೆಲ್ಲವೂ ಸಹಜೀವನ, ಸಹಬಾಳ್ವೆಯ ಸಂದೇಶವನ್ನೇ ಹೊಂದಿದ್ದರೂ ನಮ್ಮ ಧರ್ಮವೇ ಶ್ರೇಷ್ಠ, ನಮ್ಮ ಧರ್ಮದ ಸಿದ್ಧಾಂತಗಳನ್ನೇ ಸರ್ವರೂ ಪಾಲಿಸಬೇಕೆಂಬ ಪರಿಪಾಠದಿಂದಾಗಿ ಮಾನವೀಯ ಸ್ವಧರ್ಮವು ಮರ್ಮವಾಗಿದೆ. ಧರ್ಮಾಂಧತೆಯ ಭಯೋತ್ಪಾದನೆಯು ಮೇಲುಗೈ ಸಾಧಿಸಿ, ಜನಜೀವನದೊಳಗೆ ಭಯಭೀತಿಯನ್ನು ಸೃಷ್ಟಿಸಿದೆ. ಧರ್ಮದ ಹೆಸರಿನಲ್ಲಿ ಹಿಂಸೆಯು ತಾರಕಮಟ್ಟಕ್ಕೇರಿದೆ. ಸ್ವಧರ್ಮ ಅಂದರೆ ಸಹಚರರ ಹಕ್ಕುಗಳನ್ನು ಗೌರವಿಸುವುದು ಮತ್ತು ಯಾವುದೇ ತರ-ತಮ ಭಾವವನ್ನು ಹೊಂದದೇ ನೆಮ್ಮದಿಯ ಬದುಕನ್ನು ಸಾಗಿಸುವುದು, ಸಾಗುವಂತೆ ನೋಡಿಕೊಳ್ಳುವುದಾಗಿದೆ. ಸ್ವಧರ್ಮವು ತರ್ಕ, ಕುತರ್ಕಗಳನ್ನಾಗಲಿ, ಸಂಖ್ಯಾ ಬಾಹುಳ್ಯವನ್ನಾಗಲಿ ಅಥವಾ ಹೆಚ್ಚುಗಾರಿಕೆಯ ಹುಚ್ಚುತನವನ್ನಾಗಲಿ ಅವಲಂಬಿಸಿದೆ. ನಾನು ಎಲ್ಲರಿಗಾಗಿ ಎಲ್ಲರೂ ನನಗಾಗಿ ಎಂಬ ಸಹಜೀವನ, ನೆಮ್ಮದಿ ಬದುಕಿನ ರಹದಾರಿಯಾಗಿದೆ. ಈ ದಾರಿಯನ್ನು ಕಿರಿದು ಮಾಡುತ್ತಿರುವ ಪೈಪೋಟಿ ನಿಲ್ಲಬೇಕಿದೆ.

**ನಂಬಿಕೆ, ವಿಶ್ವಾಸ ಉಳಿಸಿಕೊಳ್ಳುವುದೇ ನೆಮ್ಮದಿಗೆ ಬುನಾದಿ:**

ನಾಲಿಗೆ ಗಟ್ಟಿಯಾದಂತೆ ನಮ್ಮ ನಡೆ-ನುಡಿಗಳೆಲ್ಲವೂ ಸಭ್ಯ, ಸುಸಂಸ್ಕೃತಿಗೊಳ್ಳುತ್ತವೆ. ನಾಲಿಗೆ ಮನುಷ್ಯ ಬದುಕಿನ ದಿಕ್ಸೂಚಿಯಾಗಿದೆ. ಮಾತು-ಮಾತಿನೊಳಗೆ ಮಸಲತ್ತು ಬಿಗಿದುಕೊಂಡದ್ದಾದರೆ ಬದುಕು ನಂಬಿಕೆಗೆ ಅರ್ಹವಾಗಲಾರದು. ಯಾರು, ಯಾರಿಗೆ ಬಾಧ್ಯಸ್ಥರಾಗಿರಬೇಕೆಂಬುದು ಮುಖ್ಯವಾಗಿರುವಂತೆ ತನಗೆ ತಾನು ನಂಬಿಕೆ, ವಿಶ್ವಾಸ ಹೊಂದಿರುವುದು ಮುಖ್ಯವಾಗಿದೆ. ನಂಬಿಕೆ, ವಿಶ್ವಾಸಗಳು ಉತ್ತರದಲ್ಲಿರುವ ಕುಟುಂಬ, ಸಮಾಜ ಸಮುದಾಯ ದೊಳಗೆ ಏರಿಳಿತಗಳಾಗಲಿ, ವೈರುಧ್ಯಗಳಾಗಲಿ, ವಿರಹ-ತಾಪಗಳಾಗಲಿ ಉದ್ಭವಿಸಲಾರವು. ನಂಬಿಕೆಗೆ ದ್ರೋಹವನ್ನು ಎಸಗುವುದೆಂದರೆ ತನ್ನತನದೊಳಗೆ ದ್ವಂದ್ವಗಾರಿಕೆಯನ್ನು ನಂಬಿಕೆ, ವಿಶ್ವಾಸ ನೆಮ್ಮದಿ ಬದುಕಿನ ಸಹಜ ಧರ್ಮಸೂತ್ರ ಗಳಾಗಿವೆ. ಇವು ಜವಾಬ್ದಾರಿಯ ಬೇರುಗಳೂ ಆಗಿವೆ. ನಂಬಿಕೆ, ವಿಶ್ವಾಸಗಳು ಜನರೊಳಗೆ ಇರುವ ಅಂತಃಕರಣ ವನ್ನು ಸೂಚಿಸುತ್ತದೆ. ಅಂತಃಕರಣ, ದಯೆ, ಇವು ನೆಮ್ಮದಿಯ ಬದುಕಿನ ಮುನ್ನಡೆಗಳೇ ಆಗಿವೆ.

**ಉಪಸಂಹಾರ** : ವ್ಯಕ್ತಿ ಬದುಕಿನೊಳಗೆ ಎಲ್ಲಿಲ್ಲದ ಕತ್ತಲು ತುಂಬಿಕೊಳ್ಳುತ್ತಲಿದೆ. ಸ್ವಾರ್ಥಪರ ಕಾರ್ಯಕಲಾಪಗಳು ಗುರುತರವಾಗಿ ಹಬ್ಬಿಕೊಳ್ಳುತ್ತಲಿವೆ. ಶ್ರಮ ಸಂಸ್ಕೃತಿ, ಉತ್ತಮ ಆಚಾರ-ವಿಚಾರಕ್ಕಿಂತಲೂ ಪುಕ್ಕಟ್ಟೆ ಗಿಟ್ಟಿಸಿಕೊಳ್ಳುವ ಗಿಟ್ಟಲು ಅವಕಾಶವಿರುವಲ್ಲಿ ದಾಪುಗಾಲು ಹಾಕಿಕೊಳ್ಳುವುದು ಹೆಚ್ಚು ಸುರಕ್ಷಿತ ಎಂಬ ಭಾವ ಬೆಳೆಯುತ್ತಲಿದೆ. ಯಾರು, ಯಾರಿಗೂ ಸಂಬಂಧವಿಲ್ಲದಂತೆ ಮತ್ತು ಪರಸ್ಪರರಲ್ಲಿ ನಂಬಿಕೆಯಿರದಷ್ಟು ಆತಂಕ, ಅವಿಶ್ವಾಸದ ವಾತಾವರಣವಿದೆ. ಬೇಜವಾಬ್ದಾರಿ ನಡೆ-ನುಡಿಗಳು, ಕರ್ತವ್ಯಲೋಪ, ಮೋಸ, ವಂಚನೆ, ದರ್ಪ ದಬ್ಬಾಳಿಕೆ, ಮದ-ಮತ್ಸರಗಳಾಚೆ ಬದುಕುವ ಸಂಕಲ್ಪವು ಜವಾಬ್ದಾರಿಯುತವಾಗಿ ನಿರ್ವಹಿಸಲ್ಪಟ್ಟರೆ ಮಾತ್ರ ಮನುಕುಲವು ನೆಮ್ಮದಿ, ಸುಖ, ಸಂತೋಷಗಳನ್ನು ಹೊಂದಬಹುದಾಗಿದೆ.

# ಪರಿಸರ ರಕ್ಷಣೆ

– ಆರ್.ಎಸ್. ಚಾಪಗಾವಿ *

ಪರಿಸರ ಎಂದರೆ ಈ ನೈಸರ್ಗಿಕ ಸೃಷ್ಟಿ ನಾವು ವಾಸಿಸುವ ಭೂಮಿ, ಸಾಗರ, ಬೆಟ್ಟ, ಬಯಲು, ನದಿ, ಸರೋವರ, ಗಿಡಮರ, ಬೆಳೆಗಳು, ಹವಾಮಾನ, ಬಿಸಿಲು, ಮಳೆ, ಮನುಷ್ಯ, ಪ್ರಾಣಿ, ಪಕ್ಷಿ, ದ್ವಿಚರ, ಜಲಚರ, ಕ್ರಿಮಿ ಕೀಟ ಮೊದಲಾದ ಜೀವಸಂಕುಲ ಒಂದಕ್ಕೊಂದು ಕೊಂಡಿ ಯಂತೆ ಬೆಸೆದುಕೊಂಡ ಒಂದು ವ್ಯವಸ್ಥೆ. ಈ ವ್ಯವಸ್ಥೆ ನಿರಂತರ ನಡೆಯಬೇಕು. ಇದಕ್ಕೆ ಕುಂದು ಬಂದರೆ ಗಂಡಾಂತರ ತಪ್ಪಿದ್ದಲ್ಲ. ಭೂಮಿಯ ಮೇಲೆ ಬದುಕುತ್ತಿರುವ ಎಲ್ಲ ಜೀವಿಗಳು ಸರಪಳಿಯಂತೆ ಪರಸ್ಪರ ಅವಲಂಬಿತರು. ಈ ಸರಪಳಿಯ ಕೊಂಡಿ ಕಳಚಿದರೆ ಎಲ್ಲವೂ ತಮ್ಮ ಅಸ್ತಿತ್ವ ಕಳೆದುಕೊಳ್ಳುವುದು ಖಚಿತ' ಎಂದು ಜಾರ್ಜ್ ಬರ್ನಾರ್ಡ್ ಶಾ ಹೇಳಿದ್ದಾನೆ. ಕಾರಣ ಪರಿಸರದ ಅಸ್ತಿತ್ವಕ್ಕೆ ಚ್ಯುತಿ ಬರದಂತೆ ಅದನ್ನು ಕಾಯ್ದುಕೊಂಡು ಹೋಗುವುದು ನಮ್ಮ ಆದ್ಯ ಕರ್ತವ್ಯವಾಗಿದೆ.

ಭೂಮಿಯ ಮೇಲೆ ಜನಸಂಖ್ಯೆ ಹೆಚ್ಚಾದಂತೆ ನಾಗರಿಕತೆ ಬೆಳೆದಂತೆ ವಿಜ್ಞಾನದಲ್ಲಿ ಹೊಸ ಹೊಸ ಆವಿಷ್ಕಾರ ನಡೆದಂತೆ ಪರಿಸರದ ಸಮತೋಲನ ತಪ್ಪುತ್ತಿದೆ. ಬೃಹತ್ ಉದ್ದಿಮೆಗಳು ಗಣಿಗಾರಿಕೆ, ಕೈಗಾರಿಕೆ, ಸಾರಿಗೆ, ಸಂಪರ್ಕ, ಅಣ್ವಸ್ತ್ರ ತಯಾರಿಕೆ, ರಾಸಾಯನಿಕ ಔಷಧ ಗೊಬ್ಬರಗಳ ಉತ್ಪಾದನೆಯಿಂದ ಪರಿಸರ ಕೆಡುತ್ತಿದೆ. ನೆಲ ನೀರು ಹವೆ ಮಲಿನವಾಗುತ್ತಲಿವೆ. ಶಬ್ದ ಮಾಲಿನ್ಯ ಮಿತಿ ಮೀರುತ್ತಿದೆ. ಇಂಧನ ದಹನದಿಂದ ಕಾರ್ಖಾನೆಗಳು ವಾಹನಗಳು ಹೊರ ಗೆಡವುತ್ತಿರುವ ದೂಷಿತ ಹೊಗೆಯಿಂದ ಹವಾಮಾನ ಕಲುಷಿತವಾಗುತ್ತ ನಡೆದಿದೆ. ಮಿಥೇನ್ ಕಾರ್ಬನ್ ಡೈಆಕ್ಸೈಡ್ ನೈಟ್ರಸ್ ಡೈ ಆಕ್ಸೈಡ್‌ಗಳು ಹೆಚ್ಚುತ್ತಿದ್ದು, ಸೂರ್ಯನ ನೇರಳೆ ಕಿರಣಗಳಿಂದ ಜೀವ ರಕ್ಷಿಸುವ ಓಝೋನ್ ಪದರ ಸಡಿಲವಾಗುತ್ತಿದೆ. ಇದರಿಂದ ಶರೀರದ ಡಿ.ಎನ್.ಎ. ಹಾಳಾಗಿ ಚರ್ಮರೋಗಗಳು ಹೆಚ್ಚುತ್ತಿವೆ. ಪ್ಲಾಸ್ಟಿಕ್ ಮತ್ತು ಇತರ ಕಾರ್ಖಾನೆ ತ್ಯಾಜ್ಯಗಳು ಮಿತಿ ಮೀರಿವೆ. ಬೆಳೆಗಳಿಗೆ ರಸ ಗೊಬ್ಬರ ಉಪಯೋಗಿಸು ವುದು ಹಾಗೂ ಡಿಡಿಟಿ ಎಂಡೋ ಸಲ್ಫಾನ್ ಮೊದಲಾದ ವಿಷಕಾರಕ ಔಷಧಗಳ ಸಿಂಪರಣೆಯಿಂದ ಜೀವಿಗಳ ಮನುಷ್ಯರ ಆರೋಗ್ಯದ ಮೇಲೆ ವಿಪರೀತ ಪರಿಣಾಮ ವಾಗುತ್ತಿದೆ. ಹೆಚ್ಚುತ್ತಿರುವ ಶಬ್ದಮಾಲಿನ್ಯದಿಂದ ಕಿವುಡತೆ ರಕ್ತದೊತ್ತಡ ಹೃದ್ರೋಗಗಳು ಹೆಚ್ಚುತ್ತಿವೆ. ಜಾಗತಿಕ ತಾಪಮಾನ ಸತತ ಏರುತ್ತಿದ್ದು, ಮಂಜುಗಡ್ಡೆಗಳು ಕರಗುತ್ತಿವೆ. ಸಮುದ್ರದ ಪಾತಳಿ ಏರುತ್ತಿದ್ದು, ಕರಾವಳಿ ಪ್ರದೇಶಗಳು ಸಾವಿರಾರು ದ್ವೀಪಗಳು ಮುಳುಗುವ ಭಯವಿದೆ.

ಪರಿಸರವನ್ನು ಕಾಪಾಡಿಕೊಂಡು ಬರುವಲ್ಲಿ ಮರಗಳ ಪಾತ್ರ ಬಲು ದೊಡ್ಡದು. ಕಾಡಿದ್ದರೆ ನಾಡು, ಮಳೆ ಬರಿಸಲು ಕಾಡು ಬೇಕೇ ಬೇಕು. ಮನುಷ್ಯನಿಗೆ ಹಾನಿಕಾರಕವಾದ ಕಾರ್ಬನ್ ಡೈ ಆಕ್ಸೈಡ್ ಉಪಯೋಗಿಸಿಕೊಂಡು ಮರಗಳು ತಮ್ಮ ಆಹಾರವನ್ನು ತಯಾರಿಸುತ್ತವೆ. ಕಲುಷಿತ ಗಾಳಿಯಲ್ಲಿನ ನೈಟ್ರೋಜನ್ ಆಕ್ಸೈಡನ್ನು ಹೀರಿಕೊಳ್ಳುತ್ತವೆ. ಮರದ ಪ್ರತಿಯೊಂದು ಭಾಗವೂ ತುಂಬಾ ಉಪಯುಕ್ತ ವಾಗಿದೆ. ಪ್ರತಿಯೊಂದು ಸಸ್ಯಕ್ಕೂ ತನ್ನದೇ ಆದ ವಿಶಿಷ್ಟತೆ ಯಿದೆ. ವೈವಿಧ್ಯಮಯವಾದ ಗಿಡದ ಎಲೆ, ಹೂ, ಹಣ್ಣು, ತೊಗಟೆ, ಕಾಂಡ, ಬೇರು, ರಸ ಎಲ್ಲವೂ ನಮಗೆ ಉಪಯುಕ್ತ ವಾಗಿವೆ. ಉರುವಲಿಗಾಗಿ, ಮನೆ ಕಟ್ಟಲು, ಹಡಗು ತಯಾರಿಕೆ, ಮರಮುಟ್ಟು ಔಷಧಗಳಿಗಾಗಿ ನಮಗೆ ಮರಗಳು ಬೇಕೇ ಬೇಕು. 'ವೃಕ್ಷಃ ರಕ್ಷತಿ ರಕ್ಷಿತಃ' ನಾವು ಮರಗಳನ್ನು ರಕ್ಷಿಸಿದರೆ ಅವು ನಮ್ಮನ್ನು ರಕ್ಷಿಸುತ್ತವೆ. ಆದರೆ ಇಂದು ನಾವು ಅಭಿವೃದ್ಧಿ ನೆಪದಲ್ಲಿ ಮರಗಳನ್ನು ಕಡಿಯುತ್ತಿದ್ದೇವೆ. ಮನುಷ್ಯನ ಮಹಾತ್ವಾಕಾಂಕ್ಷೆಗೆ ದುರಾಸೆಗೆ ಮಿತಿಯೇ ಇಲ್ಲ. ದಿನನಿತ್ಯ ಮನಬಂದಂತೆ ಅರಣ್ಯ ಸಂಪತ್ತನ್ನು ಲೂಟಿ ಮಾಡುತ್ತಿದ್ದೇವೆ. 'ಭೂಮಿಯು ಮಾನವನ ಅಗತ್ಯಗಳನ್ನು ಪೂರೈಸಬಹುದು. ಆದರೆ ಆತನ ದುರಾಸೆಗಳನ್ನೆಲ್ಲ' ಎಂದು ಮಹಾತ್ಮಾ ಗಾಂಧೀಜಿ ಹೇಳಿದ್ದರು. ಪ್ರತಿವರ್ಷ ಜಗತ್ತಿನಲ್ಲಿ ೧.೮ ಕೋಟಿ ಎಕರೆ ಕಾಡು ನಾಶವಾಗುತ್ತಿದೆ ಎಂದು ವಿಶ್ವಸಂಸ್ಥೆ ಅಂದಾಜು ಮಾಡಿದೆ. ಹೂವುಗಳನ್ನು ನಾವು ಇಷ್ಟಪಡುತ್ತೇವೆ. ಆದರೆ ಗಿಡಗಳಿಂದ ಅವನ್ನು ಕೀಳುತ್ತೇವೆ. ಮರಗಳನ್ನು ಪ್ರೀತಿಸುತ್ತೇವೆ ಆದರೆ ಅವನ್ನು ಕಡಿಯುತ್ತೇವೆ. ಪ್ರಾಣಿಗಳನ್ನು ಸಾಕುತ್ತೇವೆ ಆದರೆ ಅವನ್ನು ಕೊಲ್ಲುತ್ತೇವೆ.

ಹಿಂದೊಮ್ಮೆ ನಮ್ಮ ರಾಜಧಾನಿಯಾದ ಬೆಂಗಳೂರು ನಗರವು ಜಗತ್ತಿನ ಉದ್ಯಾನ ನಗರಿ ಎಂಬ ಹೆಸರು ಪಡೆದಿತ್ತು. ಇಂದು ಅದು ಕಾಂಕ್ರೀಟ್ ಕಾಡಾಗಿ ಮಾರ್ಪಟ್ಟಿದೆ. ಅಲ್ಲಿದ್ದ

* ೬೪೪, ಬಸವಚೇತನ, ರಾಮತೀರ್ಥನಗರ, ಬೆಳಗಾವಿ–೧೫.





ಸಸ್ಯ ಸಂಪತ್ತು ಸಾವಿರಾರು ಕೆರೆಗಳು ನಾಶವಾಗಿವೆ. ಹವಾಮಾನ ಕಲುಷಿತಗೊಂಡು ಶ್ವಾಸಕೋಶಕ್ಕೆ ಸಂಬಂಧಿಸಿದ ರೋಗಗಳು ಉಲ್ಬಣವಾಗಿವೆ. ತ್ಯಾಜ್ಯ ಕಸ ವಿಲೇವಾರಿ ಬಹುದೊಡ್ಡ ಸಮಸ್ಯೆಯಾಗಿ ಕುಳಿತಿದೆ. ಇತರ ಅಭಿವೃದ್ಧಿಪರ ಪಟ್ಟಣಗಳೂ ಇದೇ ಹಾದಿ ಹಿಡಿದಿವೆ. ಆರು ರಾಜ್ಯಗಳಲ್ಲಿ ಹರಡಿಕೊಂಡಿರುವ ಪಶ್ಚಿಮ ಘಟ್ಟಗಳು ಐದು ಸಾವಿರಕ್ಕೂ ಮಿಕ್ಕಿದ ವೈವಿಧ್ಯಮಯ ಪ್ರಬೇಧದ ಸಸ್ಯರಾಶಿ ಹೊಂದಿದೆ. ಅಪರೂಪದ ನೂರಾರು ತಳಿಯ ಪ್ರಾಣಿ ಪಕ್ಷಿ ದ್ವಿಚರಿಗಳ ನೆಲೆವೀಡಾಗಿದೆ. ಈ ನಿಸರ್ಗ ಪರಿಸರವನ್ನು ಕಾಯ್ದು ಕೊಂಡು ಬರುವುದು ನಮ್ಮೆಲ್ಲರ ಕರ್ತವ್ಯವಾಗಿದೆ. ೧೯ನೇ ಶತಮಾನದಲ್ಲಿ ಇಂಗ್ಲೆಂಡಿನ ಥೇಮ್ಸ್ ನದಿ ಸಂಪೂರ್ಣ ಕಲುಷಿತಗೊಂಡು ಹೈಜೋ ಮತ್ತು ಇನ್ನಿತರ ರೋಗಗಳು ಉಲ್ಬಣಿಸಿದ್ದವು. ೧೯೬೦ರಲ್ಲಿ ಇಂಗ್ಲೆಂಡ್ ಸರ್ಕಾರ ಕಾನೂನು ರಚಿಸಿ ಥೇಮ್ಸ್ ನದಿ ಶುದ್ಧೀಕರಣ ಕಾಪಾಡಿಕೊಂಡು ಬಂದಿದೆ. ನಮ್ಮ ದೇಶದಲ್ಲಿ ೧೯೮೧ರಲ್ಲಿ ಪರಿಸರ ಮಾಲಿನ್ಯ ನಿಯಂತ್ರಣ ಕಾಯ್ಕೆ ಜಾರಿಗೆ ಬಂದಿದೆ. ಆದರೆ ಅದರ ಅನುಷ್ಠಾನದಲ್ಲಿ ಸೋತಿದೆ. ತನ್ನ ಪೂರ್ವಜರಿಗೆ ಮೋಕ್ಷ ದೊರಕಿಸಲು ಭಗೀರಥ ಮಹಾರಾಜಾ ದೇವಗಂಗೆಯನ್ನು ಭೂಮಿಗೆ ಹರಿಸಿದ. ಆ ಗಂಗೆ ಈಗ ಸಂಪೂರ್ಣ ಕಲುಷಿತವಾಗಿದ್ದು, ಅದರ ಶುದ್ಧೀಕರಣಕ್ಕೆ ನಾವು ಭಗೀರಥ ಪ್ರಯತ್ನ ಮಾಡಬೇಕಾಗಿ ಬಂದಿದೆ. 'ಕೆಟ್ಟ ಮೇಲೆ ಬುದ್ಧಿ ಬಂದಿತು' ಎಂಬಂತೆ ನಮ್ಮ ಕೇಂದ್ರ ಸರಕಾರ ಈಗ ಎಚ್ಚೆತ್ತುಕೊಂಡು ಗಂಗೆ ಶುದ್ಧೀಕರಣಕ್ಕೆ ಕಾರ್ಯ ಪ್ರವೃತ್ತ ವಾಗಿರುವುದು ಸಂತಸದ ಸಂಗತಿ.

ಪರಿಸರದ ಅಸಮತೋಲನದಿಂದ ಈಗಾಗಲೇ ಹಲವಾರು ಪ್ರಬೇಧದ ಜೀವರಾಶಿ ನಾಶವಾಗಿದೆ. ನೂರಾರು ಪ್ರಾಣಿ ಪಕ್ಷಿ ದ್ವಿಚರಿಗಳು ಜಲಚರಗಳು ಅಳಿವಿನ ಅಂಚಿನಲ್ಲಿವೆ. ಧ್ರುವ ಪ್ರದೇಶಗಳಲ್ಲಿ ಪೆಂಗ್ವಿನ್‌ಗಳ ಸಂತತಿ ತೀವ್ರ ಕುಸಿದಿದೆ. ಸಾವಿರಾರು ಜಾತಿಯ ಸಸ್ಯ ತಳಿಗಳು ಮಾಯವಾಗುವ ಸ್ಥಿತಿ ಇದೆ. ಪರಿಸರದ ಸಮತೋಲನ ತಪ್ಪಿದ ಕಾರಣ ಚಂಡಮಾರುತಗಳು ಸುನಾಮಿಗಳು ಜಲಪ್ರಳಯ ಆಮ್ಲಮಳೆ ಹೊಸ ರೋಗ ರುಜಿನಗಳು ಉಂಟಾಗುತ್ತಿವೆ. ಕಳೆದ ವರ್ಷ ಉತ್ತರ ಖಂಡದಲ್ಲಿ ನಡೆದ ಜಲಪ್ರಳಯ ಅದಕ್ಕೂ ಮೊದಲು ನಡೆದ ಸುನಾಮಿಗಳ ಅಟ್ಟಹಾಸ ಇದಕ್ಕೆ ನಿದರ್ಶನವಾಗಿದೆ. ಆಹಾರ ಶುದ್ಧ ನೀರು ಹಾಗೂ ಶುದ್ಧ ಹವೆಯ ಅಭಾವದಿಂದ ಜನಜೀವನ ಅಸ್ತವ್ಯಸ್ತವಾಗುತ್ತ ನಡೆದಿದೆ. ಅಣ್ವಸ್ತ್ರಗಳ ಉತ್ಪಾದನೆ ಯಿಂದ ವಿಕಿರಣ ಹೆಚ್ಚುತ್ತಿದೆ. ಕಾರ್ಬನ್ ಡೈ ಆಕ್ಸೈಡ್ ಹೆಚ್ಚಳದಿಂದ ಭೂಮಿಯ ತಾಪಮಾನ ಏರುತ್ತಿದೆ. ಪರಿಣಾಮವಾಗಿ ಹಿಮ ಬಂಡೆಗಳು ಕರಗುತ್ತ ಸಮುದ್ರದ ಪಾತಳಿ ಹೆಚ್ಚಾಗುತ್ತಿದೆ. ಅದಕ್ಕೆಯೇ ಪರಿಸರ ರಕ್ಷಣೆಗೆ ಹೋರಾಡು ತ್ತಿರುವ ಪರಿಸರ ವಾದಿಗಳು 'Rise the Voice, Not the Sea level' ಘೋಷಣೆಯನ್ನು ಹೊರ ತಂದಿದ್ದಾರೆ. ನಮ್ಮ ದೇಶದಲ್ಲಿ ಇಂದು ಪರಿಸರ ಮಾಲಿನ್ಯ ಮಿತಿಮೀರಿದ್ದು ಇದರ ನಿವಾರಣೆಗೆ ನಾವಿಂದು ಹೋರಾಡಬೇಕಾಗಿದೆ. ನಮ್ಮ ಖಾಸಗಿ ಆಸ್ತಿ ಬಗ್ಗೆ ನಿರಂತರ ಎಚ್ಚರವಿರುವ ನಾವು ನಮ್ಮೆಲ್ಲರ ಜೀವ ಗೋಳದ ಆಸ್ತಿಯಾಗಿರುವ ಪರಿಸರದ ಬಗ್ಗೆ ಉಪೇಕ್ಷೆ ತಾಳಿದ್ದೇವೆ. ಬೆಲೆ ಏರಿಕೆ ವಿರುದ್ಧ ಧ್ವನಿ ಏರಿಸಿ ಮಾತಾಡುತ್ತೇವೆ. ಆದರೆ ಪರಿಸರ ಮಲಿನತೆಯ ಬಗ್ಗೆ ಮೌನ ತಳೆದಿದ್ದೇವೆ.

ಪರಿಸರ ರಕ್ಷಣೆಗಾಗಿ ವಿಶ್ವದ ಹಲವು ರಾಷ್ಟ್ರಗಳು ೫ಜೂನ್ ೧೯೭೨ರಂದು ಸ್ಟಾಕ್‌ಹೋಮ್‌ನಲ್ಲಿ ಸಭೆ ಸೇರಿ ಪ್ರತಿವರ್ಷ ಜೂನ್ ೫ರಂದು ವಿಶ್ವ ಪರಿಸರ ದಿನ ಆಚರಿಸಲು ಸಂಕಲ್ಪ ಮಾಡಲಾಯಿತು. ಹಿಮಾಲಯ ಕಾಡು ರಕ್ಷಣೆಗಾಗಿ ೧೯೭೫ರಲ್ಲಿ ಸುಂದರಲಾಲ್ ಬಹುಗುಣ ಅವರ ನೇತೃತ್ವದಲ್ಲಿ 'ಚಿಪ್ಕೋ' ಚಳುವಳಿ, ೧೯೮೩ರಲ್ಲಿ ಪಶ್ಚಿಮ ಘಟ್ಟ ರಕ್ಷಣೆಗಾಗಿ ಕರ್ನಾಟಕ ದಲ್ಲಿ 'ಅಪ್ಪಿಕೋ' ಚಳುವಳಿ ನಡೆಸಲಾಯಿತು. ಪ್ರತಿವರ್ಷ ದೇಶದ ಪ್ರತಿಯೊಬ್ಬರೂ ಮರಗಳನ್ನು ನೆಟ್ಟು ಬೆಳಸಿ ಪರಿಸರ ರಕ್ಷಣೆಗೆ ಮುಂದಾಗಬೇಕು. ಯುದ್ಧೋಪಾದಿ ಯಲ್ಲಿ ಈ ಆಂದೋಲನವನ್ನು ರಾಷ್ಟ್ರವ್ಯಾಪ್ತಿಯಾಗಿಸಬೇಕು. ಹಸಿರು ಪರಿಸರ ನಮ್ಮ ಉಸಿರಾಗಬೇಕು. ಕೇವಲ ಸಾಂಪ್ರದಾಯಿಕ ಇಂಧನಮೂಲಗಳನ್ನು ಅವಲಂಬಿಸದೆ ಪರ್ಯಾಯ ಇಂಧನ ಮೂಲಗಳನ್ನು ಶೋಧಿಸಿ ಬಳಸಬೇಕು. ಸೌರವಿದ್ಯುತ್, ಪವನ ವಿದ್ಯುತ್ ಉತ್ಪಾದನೆ ಹೆಚ್ಚಿಸಬೇಕು. ಜೈವಿಕ ಇಂಧನ ಎಥೆನಾಲ್ ಹೈಡ್ರೋಜನ್ ಇಂಧನಗಳಿಗೆ ಪ್ರಾಶಸ್ತ್ಯವೀಯಬೇಕು. ನವೀಕರಿಸ ಬಹುದಾದ ಇಂಧನ ನಿರ್ವಹಣೆ ವೃದ್ಧಿಗೊಳಿಸಬೇಕು. ಪರಿಸರ ರಕ್ಷಣೆಯಲ್ಲಿ ವಿದ್ಯಾರ್ಥಿಗಳು ಯುವಕರ ಪಾತ್ರ ದೊಡ್ಡದು. ಅವರ ಶಕ್ತಿಯನ್ನು ಉಪಯೋಗಿಸಿಕೊಳ್ಳಬೇಕು. ಶಾಲೆಗಳಲ್ಲಿ ಪರಿಸರ ಬಗ್ಗೆ ಶಿಕ್ಷಣ ನೀಡಬೇಕು. ಅಧಿಕಾರಿಗಳು ಜನ ಪ್ರತಿನಿಧಿಗಳು ಸಂಘ ಸಂಸ್ಥೆಗಳು ಶಿಕ್ಷಣ ಸಂಸ್ಥೆಗಳಿಗೆ ಪರಿಸರದ ಪಾಠ ಹೇಳಿ ಪರಿಸರ ರಕ್ಷಣೆಗೆ ಪ್ರೋತ್ಸಾಹಿಸಬೇಕು. ಬ್ರೆಜಿಲ್ ನಲ್ಲಿ ಈಗ ವಿಶ್ವಕಪ್ ಟೂರ್ನ್‌ಮೆಂಟ್‌ಗಾಗಿ ಸಂಪೂರ್ಣ ಪರಿಸರ ಸ್ನೇಹಿ ಸ್ಟೇಡಿಯಂಗಳನ್ನು ನಿರ್ಮಿಸಿದ್ದು, ಪರಿಸರ ಕಾಳಜಿ ಯನ್ನು ಎತ್ತಿ ತೋರಿಸುತ್ತದೆ. ಪ್ರತಿಯೊಬ್ಬ ಪ್ರಜೆ ಪರಿಸರ ರಕ್ಷಣೆ ಹೊಣೆ ಹೊತ್ತು ಕಾರ್ಯಪ್ರವೃತ್ತರಾಗಬೇಕು. ಅದು ನಮ್ಮ ಆದ್ಯ ಕರ್ತವ್ಯವಾಗಬೇಕು. ನಮ್ಮ ಮುಂದಿನ ಪೀಳಿಗೆಗೆ ಪರಿಸರ ರಕ್ಷಿಸಿಕೊಂಡು ಬರಬೇಕು.

# ನೀರು

- ರಾಜಶೇಖರಯ್ಯ *

ಮಾನವನಿಗೆ ಮೂಲಭೂತವಾಗಿ ಹಾಗೂ ಅತ್ಯಾವಶ್ಯಕವಾಗಿ ಗಾಳಿ, ನೀರು ಮತ್ತು ಆಹಾರ ಬೇಕೆ ಬೇಕು. ಗಾಳಿ ಇಲ್ಲದೆ ಮನುಷ್ಯ ಬದುಕಲಾರ. ಆದರೆ ನೀರು ಮತ್ತು ಆಹಾರವಿಲ್ಲದೇ ಅಲ್ಪದಿನ ಬದುಕಬಹುದು. ಆದರೆ ಶರೀರ ಬೌದ್ಧಿಕವಾಗಿ ಮತ್ತು ಮಾನಸಿಕವಾಗಿ ಬೆಳೆಯಲಾಗುವುದಿಲ್ಲ. ಒಟ್ಟಿನಲ್ಲಿ ಮಾನವನಿಗೆ ಗಾಳಿ, ನೀರು ಮತ್ತು ಆಹಾರ ಬೇಕೆಂಬುದು ಸತ್ಯ. ಉಚಿತವಾಗಿ ಹುಟ್ಟಿ ಖಚಿತ ವಾಗಿ ಸತ್ತರೂ, ಇವೆರಡರ ಮಧ್ಯೆ ಮಾನವನ ಬೆಳವಣಿಗೆಯಾಗುವುದು ಈ ಮೂರರಿಂದ. ಜಗತ್ತಿನ ಎಲ್ಲಾ ಜನರೂ ಒಂದೇ ರೀತಿ ಇರುವುದಿಲ್ಲವೆಂಬುದು ಸತ್ಯ ವಾದರೂ ಅವರವರ ಬೌದ್ಧಿಕ, ಶಾರೀರಿಕ, ಶೈಕ್ಷಣಿಕ ಇತ್ಯಾದಿ ವ್ಯತ್ಯಾಸಗಳು ಆಯಾ ನಾಡಿನ ವಾತಾವರಣ, ಪೀಳಿಗೆ, ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರ, ಅಡಿಗೆ, ನಡಿಗೆ, ತೊಡುಗೆ, ಇತ್ಯಾದಿಗಳ ಮೇಲೆ ಅವಲಂಬಿತವಾಗಿರುತ್ತದೆ. ಆದರೆ ನೀರು ಮಾತ್ರ ಎಲ್ಲರಿಗೂ ಬೇಕು.

ದೇವರು ಕೊಟ್ಟ ದೊಡ್ಡ ವರವೆಂದರೆ ಗಾಳಿ. ನೀರು ಮತ್ತು ಆಹಾರ ಹೇಗೆ ಸೃಷ್ಟಿಯಾಯಿತೆಂಬುದನ್ನು ಅವಲೋಕಿಸಿದಾಗ- ಲಕ್ಷ ಲಕ್ಷಾಂತರ ವರ್ಷಗಳ ಹಿಂದೆ ಭೂಮಿಯು ಒಂದು ಕಾದ ಚೆಂಡಿನಂತೆ ಸೂರ್ಯನನ್ನು ಸುತ್ತುತ್ತಾ ಮತ್ತೆ ಲಕ್ಷಾಂತರ ವರ್ಷಗಳು ಕಳೆದ ಮೇಲೆ ತಣ್ಣಗಾಗುತ್ತಾ ಹಲವು ಅನಿಲಗಳು ಸೇರ್ಪಡೆಯಾದವು. ಅವುಗಳಲ್ಲಿ ಪ್ರಮುಖವಾದ ಆಮ್ಲಜನಕದ ಎರಡು ಭಾಗ ಮತ್ತು ಜಲಜನಕ ಒಂದು ಭಾಗ ಸೇರಿ ನೀರು ಉತ್ಪತ್ತಿಯಾಯಿತೆಂದು ವಿಜ್ಞಾನಿಗಳು ಹೇಳುತ್ತಾರೆ. ಈ ನೀರು ಮೋಡದಿಂದ ಭುವಿಗೆ ಸುರಿದು ಹಳ್ಳ, ಕೊಳ್ಳ, ನದಿ, ಸಮುದ್ರವಾಗಿ-ತದನಂತರ ಪುನಃ ಆವಿಯಾಗಿ, ಮೋಡಗಳಾಗಿ ಮಳೆ ಬರುತ್ತದೆ. ಇದನ್ನೇ ಜಲಚಕ್ರವೆಂದು ಕರೆಯುವರು.

ನೀರು ಉತ್ಪತ್ತಿಯಾದ ನಂತರ 'ಅಮೀಬ' ಎಂಬ ಜೀವಕೋಶದಿಂದ ಜಗತ್ತು ಸೃಷ್ಟಿಯಾಗಲು ಪ್ರಾರಂಭವಾಯಿತು. ಅಲ್ಲಿಂದ-ಜಲಚರಗಳು, ಪಕ್ಷಿಗಳು, ಪ್ರಾಣಿಗಳು, ಮರಗಿಡಗಳು ನಂತರ ಮಾನವನ ಉದಯವಾಯಿತು. ಈ ಎಲ್ಲಾ ಜೀವಿಗಳು ಇರಬೇಕಾದರೆ, ಬೆಳೆಯಬೇಕಾದರೆ ಮೊದಲೇ ತಿಳಿಸಿದಂತೆ ಗಾಳಿ, ನೀರು ಮತ್ತು ಆಹಾರ ಬೇಕು. ಈಗ ನಾವು ನೀರಿನ ಬಗ್ಗೆ ತಿಳಿದುಕೊಳ್ಳೋಣ.

ಮಾನವನ ಶರೀರದಲ್ಲಿ ನೀರು ಶೇ ೬೦ರಿಂದ ೭೦ರಷ್ಟು ಇದ್ದರೆ ಶೇ ೨೦ರಷ್ಟು ನೀರು ದ್ರವ ಮೂಳೆ ಗಳಲ್ಲಿರುತ್ತದೆ. ಇಂದು ನೀರಿಲ್ಲದೆ ಯಾವ ಕಾರ್ಯಗಳೂ ನಡೆಯುವುದಿಲ್ಲ-ಹಾಗೆಯೇ ನೀರಿಗಿರುವ ಬೆಲೆ ಯಾವುದಕ್ಕೂ ಇಲ್ಲ. ನೀರಿನ ನಂತರ ಉಳಿದವು. ನೀರು ಅವಶ್ಯವಾದರೆ ಶುದ್ಧ ನೀರು ಅದೃಷ್ಟವಾಗಿದೆ. ಇತಿಹಾಸದಲ್ಲಿ ರಾಜ್ಯ, ಕೋಶ, ಹಣ, ಅಧಿಕಾರ, ಹೆಣ್ಣು ಇತ್ಯಾದಿಗಳಿಗೆ ಯುದ್ಧವಾದ ಎಷ್ಟೋ ಉದಾಹರಣೆಗಳಿವೆ. ಆದರೆ ಇಂದು ನೀರಿಗಾಗಿ ಯುದ್ಧ ಮಾಡಬೇಕಿದೆ. ಅದರಲ್ಲೂ ಕುಡಿಯುವ ಸ್ವಚ್ಛ ಮತ್ತು ಪರಿಶುದ್ಧ ನೀರು ದೊರೆಯುವುದು ಕಷ್ಟ ಸಾಧ್ಯವಾಗಿದೆ. ಕಾರಣ ಮಾನವನ ಅತಿ ಬುದ್ಧಿವಂತಿಕೆ ಮತ್ತು ದುರ್ಬುದ್ಧಿಯಿಂದ ವಾತಾವರಣ ಮಲಿನವಾಗಿ ಮೂಲಭೂತವಾಗಿರುವ ಗಾಳಿ, ನೀರು ಮತ್ತು ಆಹಾರ ಕಲುಷಿತವಾಗಿದೆ. ಮೊದಲೆಲ್ಲಾ ನಮ್ಮ ತಂದೆ, ತಾತ ಮತ್ತು ಮುತ್ತಾತಂದಿರು ಹೇಳುತ್ತಿದ್ದರು- 'ಗಂಗೆಯಲ್ಲಿ ಭೇದ ಎಣಿಸಬೇಡ' ವೆಂದು ಕೆರೆ, ಕಟ್ಟೆ, ಕಾಲುವೆ ನೀರನ್ನು ಕೈ ಮುಗಿದು ಕುಡಿಯುತ್ತಿದ್ದರು. 'ಗಂಗಾ ಸ್ನಾನಃ ತುಂಗಾ ಪಾನ'ವೆಂಬ ದೈವಭಕ್ತಿ ಅವರಲ್ಲಿತ್ತು. ಇಂದು ನೀರಿಗಾಗಿ ಕಿ.ಮೀ. ಗಟ್ಟಲೆ ಅಲೆಯಬೇಕಿದೆ. ಹೀಗಾಗಲು ಮುಖ್ಯ ಕಾರಣ-ಮಾನವ.

*'ನೆಲ ಬಗೆದು ಜಲ ತೆಗೆದು ಒಣಗಿದಳು ಭೂತಾಯಿ*
*ಬಾಯ್ತೆರೆದು ಕಬಳಿಸಲು ಕಾದಿಹಳು ಈ ತಾಯಿ'*

ಎಂಬಂತಾಗಿದೆ. ಎಲ್ಲೆಲ್ಲೂ ನೀರಿಗಾಗಿ ಅಲೆದಾಟ, ಹೊಡೆದಾಟ, ಹೋರಾಟ ಕೊನೆಗೆ ನಾವು ಈ ದಿನದ ಚಿತ್ರಣವಾಗಿದೆ. ಜನಸಂಖ್ಯಾ ಸ್ಫೋಟ, ಅರಣ್ಯಗಳ ನಾಶ, ವಾತಾವರಣದ ಮಲಿನತೆ ನಾವು ಬೆಳೆಸಿದ ಕೂಸುಗಳಾಗಿವೆ. ಈ ಕೂಸುಗಳು ಬೆಳೆದಷ್ಟು ಊಹಿಸಲಾರದ, ಜೀವಿಸಲಾರದ ಸಮಸ್ಯೆಗಳು ಸೃಷ್ಟಿಯಾಗುತ್ತವೆ. ಇದನ್ನು ಅರಿತು ನಾವು ಚಿಂತಿಸಬೇಕಾಗಿದೆ. ಶುದ್ಧ ನೀರು, ಕಲ್ಮಷ ರಹಿತ ವಾತಾವರಣ, ಬೆರಕೆಯಿಲ್ಲದ ಆಹಾರದ ಬಗ್ಗೆ ಆಲೋಚಿಸ ಬೇಕಾಗಿದೆ.

ನೀರು ಅತ್ಯಮೂಲ್ಯ ಆಹಾರವೆಂದೇ ಹೇಳಬಹುದು. ನಮ್ಮ ದೇಹ ಸುಸ್ಥಿತಿಯಲ್ಲಿರಬೇಕಾದರೆ ದಿನಂಪ್ರತಿ ಎಂಟು ಲೋಟ ನೀರು ಬೇಕು. ದೇಹಕ್ಕೆ ನೀರಿನ ಕೊರತೆಯನ್ನು ತಿಳಿಯಲು ನಾವು ವಿಸರ್ಜಿಸುವ ಮೂತ್ರ ಹಳದಿ ಬಣ್ಣ ವಾಗಿದ್ದರೆ ದೇಹಕ್ಕೆ ನೀರು ಬೇಕು ಎಂದು ತಿಳಿದು ನೀರು ಕುಡಿಯಬೇಕು. ಮೂತ್ರವು ಬಿಳಿಬಣ್ಣವಿದ್ದರೆ ಆರೋಗ್ಯ ವಾಗಿದ್ದೇವೆಂದು ಆರೋಗ್ಯ ಶಾಸ್ತ್ರ ತಿಳಿಸುತ್ತದೆ. ಕೆಲವರು ನೀರಿನ ಬದಲು-ತಂಪು ಪಾನೀಯ, ಸೋಡಾ ಮತ್ತು ಮದ್ಯ ಸೇವಿಸುವರು. ಇವು ನೀರಿಗೆ ಸಮವಲ್ಲ, ಆರೋಗ್ಯಕ್ಕೂ ಒಳ್ಳೆಯದಲ್ಲ.

**ದೇಹಕ್ಕೆ ನೀರು ಏಕೆ ಬೇಕು ?**

೧. ಬೇಸಿಗೆ ಕಾಲದಲ್ಲಿ ನೀರು ದೇಹವನ್ನು ಬಳಲದಂತೆ (೯೮.೪) ಉಷ್ಣ ಹೆಚ್ಚಾಗದಂತೆ ನೋಡಿಕೊಳ್ಳುತ್ತದೆ. ಬೇಸಿಗೆಯಲ್ಲಿ ಬೆವರಿನಿಂದ ನೀರು ಹೊರಹೋಗುವುದರಿಂದ ಹೆಚ್ಚು ಹೆಚ್ಚು ನೀರು ಕುಡಿಯಲೇಬೇಕು.

೨. ಚಳಿಗಾಲದಲ್ಲಿ ಬೆವರು ಕಡಿಮೆಯಾಗಿ, ದೇಹದಲ್ಲಿ ಕಲ್ಮಷ ಮತ್ತು ಕೊಬ್ಬಿನಾಂಶ ಹೊರಗೆ ಹೋಗಲು ಅಧಿಕ ನೀರು ಸೇವಿಸಬೇಕು.

೩. ಬೆಳಿಗ್ಗೆ ಎದ್ದ ತಕ್ಷಣ ಬಾಯ್ತೊಳೆದು ಎರಡು ಲೋಟ ನೀರು ಕುಡಿಯುವುದರಿಂದ ಮಲವಿಸರ್ಜನೆ ಸಲೀಸಾಗುವುದು.

೪. ದೇಹದ ತೂಕ ಇಳಿಸಿಕೊಳ್ಳಲು ಬಿಸಿನೀರು ಕುಡಿಯುವುದು ಉತ್ತಮ.

೫. ನಾವು ತಿನ್ನುವ ಆಹಾರದಲ್ಲಿ ಕ್ಯಾಲ್ಸಿಯಂ, ಪಾಸ್ಫರಸ್, ಮೆಗ್ನೀಷಿಯಂ ಇತರೆ ಲವಣಗಳು ಮೂತ್ರದ ಮೂಲಕ ಹೊರಹೋಗಬೇಕು. ಇಲ್ಲದಿದ್ದಲ್ಲಿ ಮೂತ್ರಕೋಶದಲ್ಲಿ ಕಲ್ಲುಗಳಾಗುತ್ತವೆ. ಪ್ರಯುಕ್ತ ಹೆಚ್ಚು ನೀರು ಕುಡಿಯಬೇಕು.

೬. ನೀರು ಪಚನಕ್ರಿಯೆಗೆ ಸಹಾಯವಾಗುವುದರಿಂದ ಊಟಕ್ಕೆ ಮೊದಲು ಅರ್ಧಲೋಟ ಊಟದ ನಂತರ ಸಾಕಷ್ಟು ನೀರು ಸೇವಿಸಬೇಕು. ಊಟದ ಮಧ್ಯೆ ನೀರು ಕುಡಿಯಬಾರದು. (ಖಾರ, ಬಿಕ್ಕಳಿಕೆ, ತೇಗು, ಕೆಮ್ಮು ಬಂದಾಗ ಸ್ವಲ್ಪ ನೀರು ಸೇವಿಸಬೇಕು)

೭. ಒಂದೊಮ್ಮೆ ವಾಂತಿ ಅಥವಾ ಭೇದಿಯಿಂದ ದೇಹದಲ್ಲಿ ನೀರಿನಾಂಶ ಕಡಿಮೆಯಾಗಿ ನಿರ್ಜಲತೆ (De-hydration) ಉಂಟಾಗಿ ಸುಸ್ತು, ಕಣ್ಣುಉರಿ, ಕಣ್ಣುಗಳು ಗುಳಿ ಬೀಳುವುದು, ತುಟಿಗಳು ಒಣಗುವುದು, ನಾಲಿಗೆ ಒಣಗಿ ತೊದಲುವುದು ಮುಂತಾದ ಲಕ್ಷಣಗಳು ಕಂಡು ಬಂದರೆ ತಕ್ಷಣ ನೀರಿಗೆ ಕೊಂಚ ಉಪ್ಪು ಮತ್ತು ಸಕ್ಕರೆ ಬೆರಸಿ ಯಥೇಚ್ಛವಾಗಿ ನೀರು ಸೇವಿಸಬೇಕು.

೮. ಮೂತ್ರಕೋಶದ ಸೋಂಕು ಇರುವವರು ಹೆಚ್ಚು ಹೆಚ್ಚು ನೀರು ಸೇವಿಸುವುದು ಉತ್ತಮ. ಇಲ್ಲವಾದಲ್ಲಿ ಸೋಂಕು ಉಲ್ಬಣವಾಗುತ್ತದೆ. ಅಧಿಕ ನೀರು ಸೇವನೆ ದೇಹದಲ್ಲಿ ಉತ್ಪತ್ತಿಯಾಗುವ ಕಲ್ಮಷವನ್ನು ಹೊರ ಹಾಕುತ್ತದೆ.

೯. ಸಾಮಾನ್ಯ ಮನುಷ್ಯನ ಶರೀರದ ೩.೭ ಗ್ಯಾಲನ್ ನಲ್ಲಿರುವ ಕಲ್ಮಷವನ್ನು ಸ್ವಚ್ಛಗೊಳಿಸಲು ನೀರು ಸೇವನೆ ಮಾಡಲೇಬೇಕು.

೧೦. ತಣ್ಣೀರು ಸ್ನಾನ ದೇಹಕ್ಕೆ ಒಳ್ಳೆಯದು. ಅತೀ ಬಿಸಿ ನೀರು ಸ್ನಾನದಿಂದ ಮುಖದ ಕಾಂತಿ ಕಳೆಗುಂದುತ್ತದೆ. ಚರ್ಮ ಒರಟಾಗುತ್ತದೆ.

೧೧. ಆಗಾಗ್ಗೆ ನೀರಿನಿಂದ ಬಾಯಿ ಮುಕ್ಕಳಿಸುವುದರಿಂದ ಬಾಯಿಯ ದುರ್ವಾಸನೆ ದೂರವಾಗುತ್ತದೆ.

೧೨. ಬೇಸಿಗೆಯಲ್ಲಿ ನೀರು ಸೇವನೆ ಬೇಸರವೆನಿಸಿದರೆ ಕಲ್ಲಂಗಡಿ ಹಣ್ಣು ತಿನ್ನುವುದು ಉತ್ತಮ. ಈ ಹಣ್ಣಿನಲ್ಲಿ ಶೇ.೯೨ ರಷ್ಟು ನೀರಿನಾಂಶವಿದೆ. ಮೂತ್ರನಾಳ ಸೋಂಕಿರುವವರು ಈ ಹಣ್ಣನ್ನು ಉಪಯೋಗಿಸುವುದು ಶ್ರೇಷ್ಠ.

೧೩. ದೇಹದಲ್ಲಿ ರಕ್ತ ಚಲಿಸಬೇಕಾದರೆ ನೀರಿನ ಸಹಾಯ ಬೇಕಿರುವುದರಿಂದ ನೀರು ಸೇವಿಸಬೇಕು.

೧೪. ಅತಿ ಹೆಚ್ಚು ನೀರು ಸೇವನೆಯಿಂದ ಕಿಡ್ನಿ ಮತ್ತು ಜಠರ ಹೆಚ್ಚು ಕೆಲಸ ಮಾಡಬೇಕಾಗುತ್ತದೆ. ಆಗ

* ನಿವೃತ್ತ ಪ್ರಾಂಶುಪಾಲರು, 'ಶ್ರೀ ಸಿದ್ಧಲಿಂಗಕೃಪ', ನಂ. ೧೧೨೮, ೩೬ನೇ ಕ್ರಾಸ್, ಎಸ್.ಐ.ಟಿ ಬಡಾವಣೆ, ತುಮಕೂರು.

ಅವುಗಳ ಶಕ್ತಿ ಕ್ಷೀಣವಾಗುತ್ತದೆ. ಪ್ರಯುಕ್ತ ಅತಿ ಹೆಚ್ಚು ನೀರು ಸೇವನೆ ಆರೋಗ್ಯಕ್ಕೆ ಒಳ್ಳೆಯದಲ್ಲ.

೧೫. ಮಳೆ ನೀರು ಮತ್ತು ಕಾಯಿಸಿ ಆರಿಸಿದ ನೀರು ದೇಹಕ್ಕೆ ಒಳ್ಳೆಯದು.

೧೬. ಜ್ವರ ಬಂದಾಗ ತಣ್ಣೀರು ಬಟ್ಟೆಯನ್ನು ಹಣೆಗೆ ಹಾಕಬೇಕು.

೧೭. ಬಿಸಿಲು ಹೊಡೆತ (Sun stroke) ತಪ್ಪಿಸಿಕೊಳ್ಳಲು ತಲೆ ಮತ್ತು ಕುತ್ತಿಗೆ ಸುತ್ತ ತಣ್ಣೀರು ಬಟ್ಟೆ ಹಾಕಬೇಕು.

೧೮. ಭೇದಿಯಾದಾಗ ತಣ್ಣೀರು ಬಟ್ಟೆಯನ್ನು ಹೊಕ್ಕುಳದ ಮೇಲಿಡಬೇಕು.

೧೯. 'ಹಿಸ್ಟೀರಿಯಾ' ರೋಗವಿದ್ದವರು ಒಂದು ವಾರ ಕಾಲ ಉಪ್ಪು ಬೆರೆತ ತಣ್ಣೀರು ಸ್ನಾನದಿಂದ ಸುಧಾರಣೆ ಕಾಣಬಹುದು.

೨೦. ಹದವಾದ ಬಿಸಿನೀರಿನ ಸ್ನಾನದಿಂದ ಸುಖ ನಿದ್ರೆ ಬರುತ್ತದೆ.

೨೧. ತಣ್ಣೀರು ಸ್ನಾನದಿಂದ ಕೂದಲು ಉದುರುವುದು ತಪ್ಪುತ್ತದೆ. ದೇಹದ ಎಲ್ಲಾ ನರಗಳು ಸಕ್ರಿಯವಾಗಿ ತಮ್ಮ ಕಾರ್ಯವನ್ನು ನಿರ್ವಹಿಸಲು ಸಹಾಯ ವಾಗುತ್ತದೆ.

ಇಂತಹ ಉಪಯುಕ್ತವಾದ ನೀರನ್ನು ಕಲುಷಿತಗೊಳಿಸ ಬಾರದು. ಉಪಯೋಗಕ್ಕೆ ತಕ್ಕಷ್ಟು ಮಾತ್ರ ಬಳಸಬೇಕು. ಮಳೆ ಕೊಯಿಲು ಮೂಲಕ ನೀರನ್ನು ಶೇಖರಿಸಿ ಹದವರಿತು ಉಪಯೋಗಿಸಬೇಕು. ನಮ್ಮಲ್ಲಿ ಉತ್ಪತ್ತಿಯಾಗುವ ಕಲ್ಮಷಗಳನ್ನು ನೀರಿಗೆ ಬಿಡಬಾರದು. ಕಾರ್ಖಾನೆಯಿಂದ ಬರುವ ಕಲ್ಮಷ ನೀರನ್ನು ಶುದ್ಧೀಕರಿಸಿ ಮರು ಬಳಕೆ ಮಾಡಬೇಕು. ಮಲಿನ ನೀರನ್ನು ನೀರಿಗೆ ಬಿಡದೆ ಗಿಡಮರ ಬೆಳೆಸಲು ಬಳಸಬೇಕು. ನಗರ ಮತ್ತು ಪಟ್ಟಣಗಳ ಮಿತ್ರರಾದ ನಾಗರೀಕರು ನೀರಿಗಾಗಿ ಹಣ ಕಟ್ಟುತ್ತೇವೆಂಬ ಭಾವನೆಯನ್ನು ಬಿಟ್ಟು ಮಿತವಾಗಿ ಬಳಸಿದರೆ, ಮುಂಬರುವ ನೀರಿನ ಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ತಡೆಯಬಹುದು. ಒಟ್ಟಾರೆ ನೀರನ್ನು ದೇವರು ಕೊಟ್ಟ ವರವೆಂದು ತಿಳಿದು ಕೊಂಡು ಪೂಜ್ಯ ಭಾವನೆಯಿಂದ ಉಪಯೋಗಿಸಿದರೆ ನಾವೂ ನೀವೂ ನಮ್ಮ ಮುಂದಿನ ಜನಾಂಗಕ್ಕೆ ಕೊಟ್ಟ ದೊಡ್ಡ ಆಸ್ತಿಯಾಗುತ್ತದೆ.

○

## ಸಿದ್ಧಗಂಗಾ ಮಾಸಪತ್ರಿಕೆಯ ಅಭಿನಂದನೆ



ಬೇಲೂರು ತಾಲ್ಲೂಕು, ಬಿಕ್ಕೋಡು ಹೋಬಳಿ, ಕೆಸಗೋಡು ಗ್ರಾಮದ ಶ್ರೀ ಚಿಕ್ಕರಾಮೇಗೌಡ ಕೆ.ಪಿ. ಶಿವೇಗೌಡ್ರು ಇವರ ಮಗ ಕೆ.ಎಸ್. ತೀರ್ಥಪ್ಪ ಇವರು ಸಮಾಜ ಮತ್ತು ಶ್ರೀಮಠದ ಅಭಿಮಾನಿಗಳಾಗಿ ಸಿದ್ಧಗಂಗಾ ಮಾಸಪತ್ರಿಕೆಗೆ 200ಜನಕ್ಕೂ ಮೇಲ್ಪಟ್ಟು ಸದಸ್ಯರನ್ನಾಗಿ ಮಾಡಿಸಿ ಸದಾ ಮಾಸಪತ್ರಿಕೆಯ ಪ್ರಗತಿಗೆ ಶ್ರಮಿಸುತ್ತಿದ್ದಾರೆ. ಹಾಸನ ಜಿಲ್ಲೆಯ ಬೇಲೂರು, ಆಲೂರು, ಸಕಲೇಶಪುರ, ಅರಸೀಕೆರೆ, ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ, ಹೊಳೆ ನರಸೀಪುರ ಮುಂತಾದ ತಾಲ್ಲೂಕುಗಳಿಗೆ ಕಡೆ ಕಾಲುನಡಿಗೆಯಲ್ಲಿ ಪ್ರಯಾಣಿಸಿ, ಶ್ರೀಮಠದ ಸೇವಾ ಕಾರ್ಯಗಳನ್ನು ಮತ್ತು ಶ್ರೀ ಶ್ರೀಗಳವರ ಕಾಯಕ ದಾಸೋಹಗಳನ್ನು ಭಕ್ತರಲ್ಲಿ ತಿಳಿಸಿ, ಶ್ರೀಮಠದ ಅನನ್ಯ ಭಕ್ತರಾಗಿದ್ದಾರೆ. ಸಿದ್ಧಗಂಗಾ ಮಾಸಪತ್ರಿಕೆ ಶ್ರೀಯುತರನ್ನು ಅಭಿನಂದಿಸುತ್ತದೆ.

ಪ್ರಕಾಶಕರು,
ಸಿದ್ಧಗಂಗಾ ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾಮಠ.





# ಅಶ್ವದಂತೆ ಇರುವ ಅಶ್ವಗಂಧ
## Withania somnifera, Dunal Solanaceae

- ಡಾ|| ಶೈಲೇಶ್ ಎಂ.ಡಿ. *

'ಮದ್ದಿಲ್ಲದ ರೋಗಕ್ಕೆ ಹಿರೇಮದ್ದು' ಎಂಬುದಾಗಿ ವಿವರಣೆಯನ್ನು ನಾವು ಅನೇಕ ಪುಸ್ತಕಗಳಲ್ಲಿ ಕಾಣಬಹುದು. ಹೌದು, ಈ ದ್ರವ್ಯದ ದಪ್ಪಬೇರಿನ ಚೂರ್ಣವನ್ನು ಸಕ್ಕರೆಯ ಜೊತೆಗೆ ಒಂದು ವರ್ಷದವರೆಗೆ ನಿಯಮಬದ್ಧವಾಗಿ ಸೇವಿಸಿದರೆ ಎಲ್ಲಾ ರೋಗದಿಂದ ಶರೀರವು ದೂರ ವಾಗುತ್ತದೆ ಎಂದು ಆರ್ಯುರ್ವೇದ ಶಾಸ್ತ್ರ ಹೇಳುತ್ತದೆ. ಅಶ್ವಗಂಧವು ಹಿಂದಿನ ಕಾಲದಿಂದಲೂ ಔಷಧಕ್ಕೆ ಉಪ ಯೋಗಿಸುವ ಮುಖ್ಯ ದ್ರವಗಳಲ್ಲಿ ಒಂದು. ಇದರ ಬೇರನ್ನು ಹೆಚ್ಚಾಗಿ ಔಷಧಕ್ಕೆ ಉಪಯೋಗಿಸುತ್ತಾರೆ. ಅಶ್ವಗಂಧವು ಅತ್ಯಂತ ವೀರ್ಯವರ್ಧಕ ಔಷಧೀಯ ಸಸ್ಯ ಎಂಬ ಉಲ್ಲೇಖವೂ ಇದೆ. ಹಿರೇಮದ್ದಿನ ಸೇವನೆಯಿಂದ ಮಕ್ಕಳಲ್ಲಿ ಪುಷ್ಟಿ ಲೈಂಗಿಕ ದೌರ್ಬಲ್ಯ ಮತ್ತು ವೃದ್ಧರ ಅನೇಕ ರೋಗಗಳಿಗೆ ಇದು ಪರಿಣಾಮಕಾರಿ. ಅಶ್ವಗಂಧವನ್ನು ಹಾಲಿನಲ್ಲಿ ಕುದಿಸಿ ಶುದ್ಧ ಮಾಡಬೇಕೆಂದು ಅನೇಕರು ಹೇಳುತ್ತಾರೆ. ಆದರೆ ಹಾಲಿನಲ್ಲಿ ಶುದ್ಧ ಮಾಡದೆ ಅಶ್ವಗಂಧವನ್ನು ಸೇವಿಸು ವುದರಿಂದ ಯಾವುದೇ ತೊಂದರೆ ಬಾರದು. ಯಾಕೆಂದರೆ ಆಯುರ್ವೇದ ಶಾಸ್ತ್ರದಲ್ಲಿ ಅಶ್ವಗಂಧದ ಶೋಧನದ ಬಗ್ಗೆ ಹೇಳಿರುವಂತೆ ಕಂಡು ಬರುವುದಿಲ್ಲ.

**ಬಹು ಭಾಷಾ ಹೆಸರುಗಳು :**

| | | |
|---|---|---|
| ಕನ್ನಡ | : | ಹಿರೇಮದ್ದು |
| ಸಂಸ್ಕೃತ | : | ಅಶ್ವಗಂಧ |
| ತುಳು | : | ಹಿರೇಮದ್ದು |
| ಹಿಂದಿ | : | ಅಸಗಂಧಿ |
| ಇಂಗ್ಲಿಷ್ | : | ವಿಂಟರ್‌ಚೆರಿ |

**ಪರ್ಯಾಯ ಪದಗಳು :**

ಅಶ್ವಗಂಧ, ಗಾತ್ರಕಾರಿ, ಬಲ್ಯಾ, ವಾಜೀಕರಿ, ವಾಜಿಗಂಧ, ವಾರಾಹಕರ್ಣಿ, ಹಯಾಗಂಧ, ಕುಷ್ಠಗಂಧಿ, ಬಲದಾ, ಗೋಕರ್ಣ, ಗಂಧಾಂತ.

ಅಶ್ವಗಂಧದ ಎಲೆಯನ್ನು ಕೈಗಳಲ್ಲಿ ಉಜ್ಜಿದರೆ ಕುದುರೆ ಮೂತ್ರದ ವಾಸನೆ ಬರುವುದು. ಆದುದರಿಂದ ಈ ಮೂಲಿಕೆಗೆ 'ಅಶ್ವಗಂಧ' ಎನ್ನುವರು.

**ದ್ರವ್ಯದ ವರ್ಣನೆ :**

ಅಶ್ವಗಂಧವು ಒಂದರಿಂದ ಮೂರು ಅಡಿ ಎತ್ತರಕ್ಕೆ ಬೆಳೆಯುವ ಸುಂದರವಾದ ಕುರುಚಲ ಗಿಡ. ಎಲೆಗಳು ಹಸಿರಾಗಿದ್ದು ಬೂದು ಬಣ್ಣದ ರೋಮಗಳಿಂದ ಕೂಡಿರುತ್ತದೆ. ಎಲೆಯನ್ನು ಉಜ್ಜಿದಾಗ ಕುದುರೆ ಮೂತ್ರದ ವಾಸನೆ ಬರುತ್ತದೆ. ಹೂವುಗಳು ಹಸಿರು, ಹಳದಿ ಬಣ್ಣ ದಿಂದ ಗೊಂಚಲಿನಲ್ಲಿರುತ್ತವೆ. ಹಣ್ಣು ಕೆಂಪು ಬಣ್ಣದಿಂದ ಕೂಡಿದ್ದು, ಹಣ್ಣುಗಳಲ್ಲಿ ಅಸಂಖ್ಯ ಸೂಕ್ಷ್ಮ ಬೀಜವಿರುತ್ತದೆ. ಈ ದ್ರವ್ಯದ ಬೇರು ಬಿಳಿ, ಹಳದಿ ಬಣ್ಣದಿಂದ ಕೂಡಿರುತ್ತದೆ. ಈ ದ್ರವ್ಯವು ಹೂವು ಮತ್ತು ಹಣ್ಣನ್ನು ನವೆಂಬರ್ ಫೆಬ್ರವರಿ ತಿಂಗಳಿನಲ್ಲಿ ಬಿಡುತ್ತದೆ. ಅಶ್ವಗಂಧವು ಹೆಚ್ಚಾಗಿ ಭಾರತದ ಬಯಲು ಸೀಮೆಯ ಕಾಡುಗುಡ್ಡಗಳಲ್ಲಿ ಸಿಗುತ್ತದೆ.

**ವಿಧಗಳು :**

ಅಶ್ವಗಂಧದಲ್ಲಿ ಶಾಸ್ತ್ರೀಯವಾಗಿ ಯಾವುದೇ ವಿಧವನ್ನು ಕಾಣದಿದ್ದರೂ, ಈ ದ್ರವ್ಯದಲ್ಲಿ ಸಣ್ಣ ಮತ್ತು ದಪ್ಪ ಬೇರುಳ್ಳದ್ದಾಗಿ ಬೆಳೆಯುವ ಎರಡು ವಿಧಗಳಿರುತ್ತದೆ. ಸಣ್ಣದಾಗಿ ಬೆಳೆಯುವ ಅಶ್ವಗಂಧವು ಮಧ್ಯಪ್ರದೇಶದ ನಾಗೋರಿ ಜಿಲ್ಲೆಯಲ್ಲಿ ಹೆಚ್ಚಾಗಿ ಬೆಳೆಯುತ್ತದೆ. ಆದ್ದರಿಂದಲೇ ಇದನ್ನು 'ನಾಗೋರಿ ಅಶ್ವಗಂಧ' ಎಂದು ಕರೆಯುತ್ತಾರೆ. ನಮ್ಮ ಒಳನಾಡಿನಲ್ಲಿ ಬೆಳೆಯುವ ದಪ್ಪಬೇರಿನ ಅಶ್ವಗಂಧವನ್ನು 'ನಾಟಿ ಅಶ್ವಗಂಧ', 'ಹಿರೇಮದ್ದಿನ ಬೇರು' ಎಂಬುದಾಗಿ ಕರೆಯುತ್ತಾರೆ. ಹಳ್ಳಿಯ ಜನರಿಗೆ ಇದರ ಪರಿಚಯ ಚೆನ್ನಾಗಿ ಇರುತ್ತದೆ.

* ಆಳ್ವಾಸ್ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಮೂಡಬಿದರೆ, ಮಂಗಳೂರು.

**ಉಪಯುಕ್ತ ಅಂಗಗಳು :**

* ಬೇರು * ಎಲೆ * ಹಣ್ಣು

**ದ್ರವ್ಯದ ಗುಣಧರ್ಮಗಳು :**

ರಸ : ಕಟು, ತಿಕ್ತ, ಕಷಾಯ

ಸಂಸ್ಕೃತ : ಸ್ನಿಗ್ಧ, ಲಘು

ವೀರ್ಯ : ಉಷ್ಣ

ವಿಪಾಕ : ಕಟು

ಕರ್ಮ : ವಾತಕಫಹರ, ಬಲ್ಯ, ರಸಾಯನ, ಶುಕ್ರಲ

*ಅಶ್ವಗಂಧಾ ಕಷಾಯೋಷ್ಣಾ ತಿಕ್ತಲಾ ವಾತಕಫಾಪಹಾ*

*ವಿಷವ್ರಣಕ್ಷಯಾನ್ ಹಂತಿ ಕಾಂತಿವೀರ್ಯ ಬಲಪ್ರದಾ ॥*

(ಧನ್ವಂತರಿ ನಿಘಂಟು)

ಎಂದರೆ ಅಶ್ವಗಂಧವು ಕಷಾಯರಸದಿಂದ ಕೂಡಿದೆ. ಉಷ್ಣ ವೀರ್ಯದಿಂದ ಕೂಡಿದೆ, ಪಿತ್ತ, ವಾತ, ಕಫ ದೋಷಗಳನ್ನು ನಾಶ ಮಾಡುತ್ತದೆ. ವಿಷ, ಗಾಯ, ಕ್ಷಯ ರೋಗಗಳನ್ನು ನಾಶಪಡಿಸಿ ಕಾಂತಿವೀರ್ಯ ಬಲಗಳನ್ನು ಹೆಚ್ಚಿಸುತ್ತದೆ ಎಂಬ ವಿವರಣೆಯನ್ನು ಧನ್ವಂತರಿ ನಿಘಂಟಿನಲ್ಲಿ ಕಾಣ ಬಹುದು.

**ಔಷಧಿ ಪ್ರಮಾಣ :**

ಚೂರ್ಣ : ೩-೬ ಗ್ರಾಂ.

ಲೇಹ : ೧-೧ ಚಮಚ

**ಔಷಧೀಯ ಯೋಗಗಳು :**

* ಅಶ್ವಗಂಧಾರಿಷ್ಟ * ಅಶ್ವಗಂಧಾವಲೇಹ * ಅಶ್ವಗಂಧಾದಿ ಚೂರ್ಣ * ಅಶ್ವಗಂಧಾ ರಸಾಯನ * ಅಶ್ವಗಂಧಾಘೃತ

**ಔಷಧೀಯ ಉಪಯೋಗಗಳು :**

* ಅಶ್ವಗಂಧ, ಶಾಂತಿಕಾಯಿ ಪುಡಿ ಮತ್ತು ಬೆಲ್ಲವನ್ನು ಬೆರೆಸಿ ಸ್ವಲ್ಪ ಬಿಸಿಯಿರುವ ನೀರಿನೊಂದಿಗೆ ಸೇವಿಸಿದರೆ ವಾತದಿಂದ ಬಂದ ಹೃದಯರೋಗವು ಕಡಿಮೆ ಯಾಗುತ್ತದೆ.
* ಅಶ್ವಗಂಧ ಕ್ಷಾರವನ್ನು ತುಪ್ಪ ಮತ್ತು ಜೇನಿನೊಂದಿಗೆ ಸೇವಿಸುವುದರಿಂದ 'ಉಬ್ಬಸ' ರೋಗವು ನಾಶವಾಗುತ್ತದೆ.
* ಅಶ್ವಗಂಧ ಚೂರ್ಣವನ್ನು ತುಪ್ಪದಲ್ಲಿ ದಿನಕ್ಕೆ ಮೂರು ಬಾರಿ ಸೇವಿಸುವುದರಿಂದ ಸಂಧಿವಾತ ರೋಗವು ಕಡಿಮೆ ಯಾಗುತ್ತದೆ.
* ಅಶ್ವಗಂಧದ ಮೂಲವನ್ನು ಗೋಮೂತ್ರದಲ್ಲಿ ಅರೆದು ಬಿಸಿಮಾಡಿ ಗಾಯಕ್ಕೆ ಲೇಪಿಸುವುದರಿಂದ ಗಾಯವು ಬೇಗ ಪಕ್ವವಾಗುತ್ತದೆ.
* ಅಶ್ವಗಂಧ ಚೂರ್ಣವನ್ನು ನೆಲ್ಲಿಕಾಯಿ ರಸದಲ್ಲಿ ಕಲಸಿ, ತುಪ್ಪ ಮತ್ತು ಜೇನುತುಪ್ಪದೊಂದಿಗೆ ಬೆರೆಸಿ ಸೇವಿಸುವುದ ರಿಂದ ಕಣ್ಣುದೃಷ್ಟಿಯು ವೃದ್ಧಿಯಾಗುತ್ತದೆ.
* ಒಂದೆಲಗ, ಶಂಖಪುಷ್ಪಿ, ಅಶ್ವಗಂಧ ಮತ್ತು ಶತಾವರಿ ಯನ್ನು ಬೆರೆಸಿ ಸೇವಿಸುವುದರಿಂದ ಬುದ್ಧಿ, ಬಲ ಮತ್ತು ಆಯುಷ್ಯ ವೃದ್ಧಿಯಾಗುತ್ತದೆ.
* ಅಶ್ವಗಂಧ, ಹಿಪ್ಪಲಿ, ಸಕ್ಕರೆಯ ಪುಡಿಗೆ ತುಪ್ಪ ಮತ್ತು ಜೇನುತುಪ್ಪ ಬೆರೆಸಿ ಸೇವಿಸುವುದರಿಂದ ಕ್ಷಯರೋಗಕ್ಕೆ ಒಳ್ಳೆಯದು.
* ತುಪ್ಪ, ನಾಲ್ಕರಷ್ಟು ಹಾಲು ಮತ್ತು ಅಶ್ವಗಂಧದ ಲೇಪವನ್ನು ಸೇರಿಸಿ ತಯಾರಿಸಿದ ಅಶ್ವಗಂಧ ಘೃತವು ವಾತವ್ಯಾಧಿಗೆ ಒಳ್ಳೆಯದು.
* ಅಶ್ವಗಂಧದ ಚೂರ್ಣಕ್ಕೆ ಸಕ್ಕರೆ ಬೆರೆಸಿ ಅದನ್ನು ತುಪ್ಪದಲ್ಲಿ ಸೇವಿಸುವುದರಿಂದ ನಿದ್ರಾನಾಶದಿಂದ ಬಳಲುತ್ತಿರು ವವರಿಗೆ ಒಳ್ಳೆಯದು.
* ಅಶ್ವಗಂಧದ ಕಷಾಯ ಸೇವನೆಯಿಂದ ಮೂತ್ರಧಾರಣೆ ಯಿಂದ ಬಂದ ತೊಂದರೆ ಮತ್ತು ಮೂತ್ರ ಸರಾಗವಾಗಿ ಹೋಗಲು ಸಹಾಯ ಮಾಡುತ್ತದೆ.
* ಅಶ್ವಗಂಧ ಚೂರ್ಣವನ್ನು ಸತಿಪತಿಗಳಿಬ್ಬರೂ ದಿನಕ್ಕೆ ಒಂದು ಬಾರಿ ಒಂದೊಂದು ಟೀ ಚಮಚ ಪ್ರಮಾಣದಲ್ಲಿ ಸೇವಿಸುತ್ತಾ, ಅನ್ನ, ಹಾಲು, ಸಿಹಿ ಪದಾರ್ಥಗಳನ್ನು ಸೇವಿಸುತ್ತಾ ಬಂದರೆ ಗರ್ಭಧಾರಣೆಗೆ ಒಳ್ಳೆಯದು.
* ಅಶ್ವಗಂಧ ಚೂರ್ಣ ಮತ್ತು ಕೆಂಪು ಕಲ್ಲುಸಕ್ಕರೆ ಪುಡಿಯನ್ನು ಹಾಲಿನಲ್ಲಿ ಕಾಯಿಸಿ ದಿವಸಕ್ಕೆ ಎರಡು ಹೊತ್ತು ಸೇವಿಸಿದರೆ ಬೆನ್ನುನೋವು ನಿವಾರಣೆ ಯಾಗುತ್ತದೆ.





ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೫೩೧. | ಶ್ರೀ ಬಿ.ಕೆ. ನಂಜಪ್ಪಗೌಡ ಬಿದರೆ | ೧,೧೦೦.೦೦ |
| ೫೩೨. | ಶ್ರೀ ಎಸ್. ರುದ್ರಪ್ಪ ಯತ್ನಹಳ್ಳಿ | ೨,೦೦೦.೦೦ |
| ೫೩೩. | ಶ್ರೀ ಜಿ. ಹೊನ್ನಗಂಗಯ್ಯ ಕುದೂರು | ೧,೦೦೦.೦೦ |
| ೫೩೪. | ಶ್ರೀ ಎಂ.ಆರ್. ನಿಂಗಪ್ಪ ಮೂಕವಳ್ಳಿ | ೧,೦೦೦.೦೦ |
| ೫೩೫. | ಶ್ರೀ ಆರ್.ಎನ್. ನಂಜುಂಡಯ್ಯ ಬೆಂಗಳೂರು | ೧೦,೦೦೧.೦೦ |
| ೫೩೬. | ಶ್ರೀ ಟಿ. ಬಸವರಾಜು ಬೆಂಗಳೂರು. | ೨,೦೦೧.೦೦ |
| ೫೩೭. | ಶ್ರೀ ಕೆ.ಸಿ. ಚಿಕ್ಕಣ್ಣ ಕೋಳಾಲ | ೧,೦೦೧.೦೦ |
| ೫೩೮. | ಶ್ರೀ ಎಸ್. ಶಂಕರಪ್ಪ ತುಮಕೂರು | ೧೦೦೧.೦೦ |
| ೫೩೯. | ಶ್ರೀ ಬಿ.ಎಂ. ಗುರುಮೂರ್ತಿಸ್ವಾಮಿ ಶ್ರೀಧರಗದ್ದೆ | ೧೦೦೧.೦೦ |
| ೫೪೦. | ಶ್ರೀ ಹೆಚ್.ಪಿ. ಶಿವಣ್ಣ ಹಿರಿಪುರ | ೧,೦೧೦.೦೦ |
| ೫೪೧. | ಶ್ರೀ ಎಸ್.ಜಿ. ಚಂದ್ರಪ್ಪ ಸಾಸಿವಾಲ | ೧,೦೦೦.೦೦ |
| ೫೪೨. | ಶ್ರೀ ಗುರುಸಿದ್ಧಪ್ಪ ಯತ್ನಹಳ್ಳಿ | ೧,೦೦೦.೦೦ |
| ೫೪೩. | ಶ್ರೀ ಎಂ.ಹೆಚ್. ಬಸವರಾಜು ಬೆಂಗಳೂರು. | ೨,೦೦೧.೦೦ |
| ೫೪೪. | ಶ್ರೀ ಬಿ. ಅಡವೀಶಯ್ಯ ಬೆಂಗಳೂರು | ೫,೦೦೧.೦೦ |
| ೫೪೫. | ಶ್ರೀ ಹೆಚ್.ಎಸ್. ಬಸವಲಿಂಗಪ್ಪ ಹಳೇಕೋಟೆ. | ೧,೦೦೧.೦೦ |
| ೫೪೬. | ಶ್ರೀ ಪ್ರಕಾಶ್ ಬೆಂಗಳೂರು. | ೧,೦೦೦.೦೦ |
| ೫೪೭. | ಶ್ರೀ ಹೆಚ್.ಎಂ. ಆನಂದ ಬೆಂಗಳೂರು | ೧೦,೦೦೧.೦೦ |
| ೫೪೮. | ಶ್ರೀ ಎಂ.ಎಸ್. ಶಿವಣ್ಣ ದಾವಣಗೆರೆ | ೧,೧೧,೧೧೧.೦೦ |
| ೫೪೯. | ಶ್ರೀ ಎಸ್. ನಂಜಪ್ಪ ಮಲ್ಲಸಂದ್ರ | ೫೦,೦೦೦.೦೦ |
| ೫೫೦. | ಶ್ರೀ ಬಿ.ಎಸ್. ನಾಗರಾಜು ಮೈಸೂರು | ೧,೦೦೦.೦೦ |
| ೫೫೧. | ಶ್ರೀ ಎಸ್. ಮಹದೇವಯ್ಯ ಹುಲಿಕೆರೆ ಕೊಪ್ಪಲ | ೨,೦೦೦.೦೦ |
| ೫೫೨. | ಶ್ರೀ ಚಂದ್ರಶೇಖರಯ್ಯ ತುಮಕೂರು | ೧,೦೦೧.೦೦ |
| ೫೫೩. | ಶ್ರೀ ಎನ್. ಮಹದೇವಯ್ಯ ಬೆಂಗಳೂರು | ೧,೦೦೦.೦೦ |
| ೫೫೪. | ಶ್ರೀ ಕೆ.ಎಸ್. ಶಿವರುದ್ರಯ್ಯ ಬೆಂಗಳೂರು | ೧,೦೦೬.೦೦ |
| ೫೫೫. | ಶ್ರೀ ಜಿ.ಪಿ. ರಾಜಣ್ಣ ಬೆಂಗಳೂರು | ೧,೦೦೦.೦೦ |
| ೫೫೬. | ಶ್ರೀ ಎ.ಎಂ. ಸಿದ್ಧಲಿಂಗಯ್ಯ ಮಲ್ಲಸಂದ್ರ | ೧,೦೦೦.೦೦ |
| ೫೫೭. | ಶ್ರೀ ತಿಮ್ಮೇಗೌಡ ತಿಪಟೂರು | ೧,೦೦೨.೦೦ |
| ೫೫೮. | ಶ್ರೀ ಕೆ.ಎನ್. ಪರಮೇಶ್ವರಯ್ಯ ತುಮಕೂರು | ೨,೦೧೦.೦೦ |
| ೫೫೯. | ಶ್ರೀ ವೆಂಕಟರಮಣಯ್ಯ ನೆಲಮಂಗಲ | ೧,೦೦೧.೦೦ |
| ೫೬೦. | ಶ್ರೀ ಸೋಮಶೇಖರಯ್ಯ ಮತ್ತಿಕೆರೆ | ೧,೦೦೧.೦೦ |
| ೫೬೧. | ಶ್ರೀ ಎನ್.ಎಸ್. ರಾಜಶೇಖರಯ್ಯ ತುಮಕೂರು | ೧,೦೦೧.೦೦ |
| ೫೬೨. | ಶ್ರೀ ವಿ. ಮಂಜುನಾಥ ಎನ್. ದೇವನಹಳ್ಳಿ | ೧,೦೦೦.೦೦ |
| ೫೬೩. | ಶ್ರೀ ಶಿವಶಂಕರಯ್ಯ ಬೆಂಗಳೂರು | ೨,೦೦೦.೦೦ |
| ೫೬೪. | ಶ್ರೀ ವಿ. ಭದ್ರಯ್ಯ ಬೆಂಗಳೂರು | ೧,೦೦೦.೦೦ |

## STATEMENT OF OWNERSHIP
## PARTICULARS ABOUT 'SIDDAGANGA'

### Form IV (See Rule 5)

| | | |
|---|---|---|
| Place of Publication | : | **SIDDAGANGA (Regd.)**<br>Siddaganga Math.<br>Tumkur District - 572 104. Karanataka. |
| Periodicity of its Publication | : | **Monthly** |
| Printer's Name | : | **Sree Sree Shivakumara Swamigalu** |
| Whether Citizen of India | : | Indian |
| Address | : | **Sree Siddalingeshwara Swamy Offset Printing Press,**<br>Sree Siddaganga Math,<br>Tumkur District - 572 104. |
| Publisher's Name | : | **H.B. Gangadharaiah** |
| Whether Citizen of India | : | Indian |
| Address | : | **Publisher**<br>Old Students Association,<br>Sree Siddaganga Math,<br>Tumkur District - 572 104.<br>Ph : 0816-2282322 |
| Editor's name | : | **H.V. Veerabhadraiah** |
| Nationality | : | Indian |
| Address | : | **Editor,** 'Siddaganga'<br>Sree Siddaganga Math,<br>Tumkur District - 572 104. Karnataka. |

I, H.B. Gangadharaiah hereby declare that the particulars given above are true to the best of my knowledge and belief.

Bangalore
Date : 1-3-2015

**H.B. Gangadharaiah**
Signature of Publisher

